


# ಸಪ್ತಗಿರಿ

ಅಕ್ಟೋಬರ್, 1996

ಬೆಲೆ : ರೂ. 4-00

ತಿರುಮಲ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ಸುಲಭವಲ್ಲವೊ ಮಹದಾನಂದ ತನ್ನೊಳಗೆ ತಾ
ತಿಳಿಯೋ ತನಕ ಗುರುದಯದಿಂದ

ಬೆಕ್ಕನು ಇಲಿ ನುಂಗೋ ತನಕ ಕಡು
ರಕ್ಕಸಿಯ ಕಂಡು ಗಿಣಿ ನುಂಗೋ ತನಕ
ಮಕ್ಕಳ ಭಕ್ಷಿಸೋ ತನಕ ಮದ
ಸೊಕ್ಕಿದ ಕರಿಯನು ನರಿ ನುಂಗೋ ತನಕ

ಇಬ್ಬರೊಡನೆ ಕೂಡೋತನಕ ಮುಪ್ಪ
ಹಬ್ಬಿದ ಬೆಟ್ಟವ ನೊಣ ನುಂಗೋ ತನಕ
ಒಬ್ಬಳೊಡನೆ ಸೇರೋ ತನಕ ಕೆಟ್ಟ
ಗುಬ್ಬಿಯ ರಾಜಹಂಸನ ಮಾಡೋ ತನಕ

ಒಳ ಹೊರಗೊಂದಾಗೋ ತನಕ ತಾನು
ತಿಳಿದೆನೆಂಬ ಭಾವ ಬಯಲಾಗೋ ತನಕ
ಬೆಳಕಿನೊಳಗೆ ಕಾಣೋ ತನಕ ನಮ್ಮ
ಪುರಂದರ ವಿಠಲನ ದಯವಾಗೋ ತನಕ

-ಪುರಂದರದಾಸರು



ಸಂದರ್ಶಿಸಿ. ಆನಂದಿಸಿ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
# ತಿರುಚಾನೂರು



## ವಾರ್ಷಿಕ ಬ್ರಹ್ಮೋತ್ಸವಗಳು

7-12-96 ರಿಂದ 15-12-96 ವರೆಗೆ

### ಬ್ರಹ್ಮೋತ್ಸವದ ಪ್ರಮುಖ ದಿನಗಳು

| | | |
|---|---|---|
| 7-12-96 | ಶನಿವಾರ | ಧ್ವಜಾರೋಹಣ. |
| 11--12-96 | ಬುಧವಾರ | ಗಜವಾಹನ |
| 12-12-96 | ಗುರುವಾರ | ಗರುಡವಾಹನ |
| 14-12-96 | ಶನಿವಾರ | ರಥೋತ್ಸವ |
| 15-12-96 | ಭಾನುವಾರ | ಚಕ್ರಸ್ನಾನ |

ಸೂಚನೆ: ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಾಹನ ಸೇವೆಗಳಿರುತ್ತವೆ. ಸಂಗೀತ, ಹರಿಕಥೆ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು. ತಿರುಚಾನೂರಿಗೆ ತಿರುಪತಿಯಿಂದ ಹತ್ತು ನಿಮಿಷದ ಹಾದಿ, ಒಂದರ ಹಿಂದೆ ಒಂದರಂತೆ ಬಸ್ ಸೌಕರ್ಯವುಂಟು.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ



ಸಂಪುಟ -- 27 ಅಕ್ಟೋಬರ್ 1996 ಸಂಚಿಕೆ --5

# ವಿಷಯಸೂಚಿ



ಮುಖ ಚಿತ್ರ : ಶ್ರೀ ಮಲೆಯಪ್ಪಸ್ವಾಮಿ - ತಿರುಮಲೆ.

ಹಿಂಬದಿಯಲ್ಲಿ : ತಿರುಮಲೆಯ ಆಲಯ.

ಒಳಗಡೆ : 1) ಪೊಯ್‌ಗೈ ಆಳ್ವಾರ್, 2) ಪೂದತ್ತಾಳ್ವಾರ್.


ಗೌರವ ಸಂಪಾದಕರು :

ಎಂ. ಕೆ. ಆರ್. ವಿನಾಯಕ್ ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಎಮ್. ಲಕ್ಷ್ಮಣ್ ರಾವ್

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೪--೦೦**

**ವಾರ್ಷಿಕ ಚಂದಾ ೪೮--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ||



# ಸಂಪಾದಕೀಯ



ತಿರುಮಲೆ ತಿರುಪತಿ ದೇವಸ್ಥಾನಗಳ ಬಗ್ಗೆ ತಿಳಿಯದವರಿಲ್ಲ. ಆ ಹೆಸರೇ ಒಂದು ಆಧ್ಯಾತ್ಮಿಕ ಸಂಕೇತ. ಇಲ್ಲಿ ಶ್ರೀ ಕಾರ್ಯನಿರ್ವಹಣಾಧಿಕಾರಿಯಾಗಿ ಕೆಲಸ ನಿಭಾಯಿಸುವುದೆಂದರೆ ಸಾಮಾನ್ಯ ವಿಷಯವೇನಲ್ಲ. ಎಲ್ಲರಿಗೂ ದೊರೆಯುವ ಸುಲಭ ಫಲವೂ ಅಲ್ಲ.

ಶ್ರೀ ನಿಮ್ಮಗಡ್ಡ ರಮೇಶ್‌ಕುಮಾರ್ ಯುವಕರು, ಕಾರ್ಯದೀಕ್ಷಾದಕ್ಷರು. ಸ್ವಾಮಿಸೇವೆಯಲ್ಲಿ ಸರ್ವವನ್ನೂ ಮರೆತು ಕೆಲಸ ಮಾಡುವ ಭಕ್ತಿ ತತ್ಪರರು. ಮೊದಲಿಗೆ ಸ್ವಾಮಿ ಸೇವೆಯಲ್ಲಿಯೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಯಾಗಿ ಸ್ವಲ್ಪ ದಿನವಿದ್ದು ಈ ಸೇವೆಯ ಸುಳಿವು ಸೂಕ್ಷ್ಮ, ತೆಗ್ಗು, ತೆವರು, ಹಾಸು, ಹರವುಗಳನ್ನು ಬಲ್ಲವರಾಗಿದ್ದು ನಂತರ ಕಾರ್ಯನಿರ್ವಹಣಾಧಿಕಾರಿಯಾಗಿ ಬಂದವರು.

ಶ್ರೀ ರಮೇಶ್‌ಕುಮಾರರ ಕಾಲದಲ್ಲಿ ತಿ.ತಿ.ದೇ.ಗಳಲ್ಲಿ ಅಭಿವೃದ್ಧಿ ಹೆಚ್ಚಾಯಿತು. ಎಲ್ಲ ವಿಭಾಗಗಳಲ್ಲಿ ಕಂಪ್ಯೂಟರ್‌ಗಳ ನೆಲೆಗೊಳ್ಳಲು ಅನುಕೂಲವಾಯಿತು. ತಿರುಮಲೆ ತಿರುಪತಿ ದೇವಸ್ಥಾನಗಳಲ್ಲಿನ ವಿವಿಧ ಆಲಯಗಳಲ್ಲಿನ ಬ್ರಹ್ಮೋತ್ಸವಗಳನ್ನು ತಿರುಮಲೆಯ ಆಲಯದ ಬ್ರಹ್ಮೋತ್ಸವಕ್ಕೆ ಮಾತ್ರವೇ ಎರಡನೆಯದಾಗಿರುವಷ್ಟು ವೈಭವದಿಂದ ನಡೆಸಿದರು. ಶ್ರೀ ಪದ್ಮಾವತೀ ಅಮ್ಮನವರಿಗೆ ಆರ್ಜಿತ ಕಲ್ಯಾಣೋತ್ಸವ, ತಿರುಮಲೆಯಲ್ಲಿ ಲಾಡುಪಡಿ, ಅರ್ಚನಾನಂತರ ದರ್ಶನ ಸೇವೆ ಮೊದಲಾದ ಹೊಸ ಹೊಸ ಕ್ರಮಗಳನ್ನು ಕೈಗೊಂಡಿದ್ದು ಒಂದು ಕಡೆಯಾದರೆ ವಿವಿಧ ಉತ್ಸವಗಳಲ್ಲಿ, ಮುಖ್ಯವಾಗಿ ಬ್ರಹ್ಮೋತ್ಸವಗಳಲ್ಲಿ ಜನ ಕುಳಿತು ಮೆರವಣಿಗೆಯಲ್ಲಿ ಬರುವ ವಾಹನಸೇವೆಗಳನ್ನು ನೋಡಲು ಅವಕಾಶವಾಗುವಂತೆ ತಿರುಮಲೆಯ ಮಾಡವೀಧಿಗಳಲ್ಲಿ ಅಟ್ಟಣಿಗೆಗಳ ಏರ್ಪಾಡು ಮಾಡಿದ್ದು ಬ್ರಹ್ಮೋತ್ಸವಗಳಲ್ಲಿ ಪಾಲುಗೊಳ್ಳಲು ಭಜನ ವೃಂದಗಳನ್ನು ಆಹ್ವಾನಿಸಿದ್ದು, ವಿವಿಧ ಸ್ಥಳಗಳಲ್ಲಿ ಭಜನ ಮೇಳ, ಸಾದು ಸಂಸತ್ತುಗಳನ್ನು ನಡೆಸಿದ ಕೀರ್ತಿಯೂ ಅವರದ್ದು. ಸಮಸ್ಯೆಗಳನ್ನು ಕಾಲಯಾಪನೆಯಿಲ್ಲದೆ ಪರಿಷ್ಕರಿಸಲು ಪ್ರಯತ್ನಿಸಿದ್ದು ಅವರ ಹಿರಿಮೆ. ಜೊತೆಗೇ ಅನೇಕಕಡೆ ನಿರ್ಮಾಣದ ವಿವಿಧ ಹಂತಗಳಲ್ಲಿ ನಿಧಾನವಾಗಿ ನಡೆಯುತ್ತಿದ್ದ ಕಲ್ಯಾಣ ಮಂಟಪಗಳ ಕೆಲಸಗಳನ್ನು ಪೂರ್ಣಗೊಳಿಸಿ, ಅವುಗಳು ಬಳಕೆಗೆ ಬರುವಂತೆ ಮಾಡಿದರು. ತಿರುಪತಿಯ ರಸ್ತೆಗಳು, ಸೌಂದರ್ಯ, ಒಳಚರಂಡಿ ಯೋಜನೆಗಳಲ್ಲಿ, ಸಂಚಾರ ವ್ಯವಸ್ಥೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಮುಂಚೂಣಿಯಲ್ಲಿ ನಿಂತು ಮಾರ್ಗದರ್ಶನ ಮಾಡಿದವರು.

ಇವೆಲ್ಲ ಒಂದು ಕಡೆಯಾದರೆ ಮತ್ತೊಂದು ಕಡೆ ಅವರ ಸಾಹಿತ್ಯಾಭಿಮಾನ, ಅಕ್ಷರ ಭಕ್ತಿಗಳು. ಸಪ್ತಗಿರಿಯ ಗೌರವ ಸಂಪಾದಕರಾಗಿ ಅವರು ಸಲಹೆ, ಸೂಚನೆ, ಆಜ್ಞೆಗಳನ್ನು ಆಗಾಗ ನೀಡುತ್ತಿದ್ದದ್ದು ಹೆಚ್ಚು ಅಲ್ಲವೆಂದರೂ ತಮ್ಮ ಹಲವಾರು ಕೆಲಸಗಳ ನಡುವೆಯೂ, ಸಪ್ತಗಿರಿಯ ಓದುಗರ ಬಗ್ಗೆ ಆಸಕ್ತಿ ವಹಿಸಿ, ಹಲವಾರು ಬಾರಿ ಪತ್ರಿಕೆಯ ಮೂಲಕ ಓದುಗರನ್ನು ನೇರವಾಗಿ ತಲುಪಲು ಪ್ರಯತ್ನಿಸಿದ್ದು ಶ್ಲಾಘ್ಯ.

ವರ್ಗವಾಗಿ ಹೋಗುತ್ತಿರುವ ಅವರಿಗೆ ಸಪ್ತಗಿರಿ ಹೃತ್ಪೂರ್ವಕ ಬೀಳ್ಕೊಡುಗೆ ನೀಡುತ್ತದೆ.

ಆಂಧ್ರಪ್ರದೇಶದ ಸರಕಾರದ ಐ.ಎ.ಎಸ್. ಅಧಿಕಾರಿ ಶ್ರೀ ಮಿಕ್ಕಿಲಿನೇನಿ ಕ್ಷೀರರಾಮಲಿಂಗೇಶ್ವರ ವಿನಾಯಕ ಅವರು ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಯಾಗಿ ಅಧಿಕಾರ ಸ್ವೀಕರಿಸಿದ್ದಾರೆ. ಅವರನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತದೆ ಸಪ್ತಗಿರಿ.

ಶ್ರೀ ಎಂ. ಕೆ. ಆರ್. ವಿನಾಯಕರು ಸ್ವಾಮಿಗೆ, ತಿ. ತಿ. ದೇವಸ್ಥಾನಗಳಿಗೆ ಹೊಸಬರೇನಲ್ಲ. ಆಂಧ್ರಪ್ರದೇಶದ ಮುಜರಾಯಿ ಇಲಾಖಾಕಮಿಷನರ್ ಆಗಿ ಅವರಿಗೆ ತಿ.ತಿ.ದೇ.ಗಳ ಪರಿಪಾಲನಾ ಯಂತ್ರಾಂಗದ ವಿವಿಧ ಬಿಡಿ ಭಾಗಗಳ, ಶಾಖೆಗಳ ಕೂಲಂಕಷವಾದ ಪರಿಚಯವಿದೆ. ಮೃದುಭಾಷಿಯಾಗಿ, ನಿತ್ಯ ಚೈತನ್ಯಶೀಲರಾಗಿ, ಆಡಳಿತಪರವಾದ ಅಪಾರ ಜ್ಞಾನಸಂಪನ್ನರಾಗಿರುವ ಅವರು ಗಂಭೀರವೆಂಬ ಹೆಸರಿಗೆ ಪಕ್ಕಾದರೂ ಕುಸುಮ ಕೋಮಲರಾಗಿ ಸಮಸ್ಯಾಪರಿಷ್ಕಾರದಲ್ಲಿ ಕೆಲಸಮಾಡತಕ್ಕವರು.

ಮಾತು ಕಡಮೆ ಮಾಡಿ ಭಕ್ತರಿಗೆ ಆದಷ್ಟು ಸೇವೆ ಸಲ್ಲಿಸುತ್ತ ತಿರುಮಲೆ - ತಿರುಪತಿ ದೇವಸ್ಥಾನಗಳ ಹೆಸರು, ಪ್ರತಿಷ್ಠೆ ಪರಿಸರಗಳನ್ನು ಅಭಿವೃದ್ಧಿಗೊಳಿಸುವ ಉದ್ದೇಶ ಹೊಂದಿರುವ ಅವರು ಈ ಬಾರಿ ಬ್ರಹ್ಮೋತ್ಸವಕ್ಕೆ ಸ್ವಲ್ಪ ಮುಂಚೆಯೇ ಕಾರ್ಯಭಾರ ಸ್ವೀಕರಿಸಿದ್ದಾರೆ. ಅವರ ಮೂಲಕ ಆ ದೈವ ಈ ಬಾರಿಯ ಬ್ರಹ್ಮೋತ್ಸವದ ಸೇವೆ ಪಡೆಯುವ ಸಂಕಲ್ಪ ಹೊಂದಿದನೆಂಬ ಭಾವನೆಯುಂಟಾಗದಿರದು.

ಶ್ರೀ ಎಂ. ಕೆ. ಆರ್. ವಿನಾಯಕರು ಸಪ್ತಗಿರಿಯ ಗೌರವ ಸಂಪಾದಕರಾಗಿ ಸಪ್ತಗಿರಿಯ ಓದುಗರಿಗೂ ಹತ್ತಿರವಾಗುತ್ತಾರೆ. ಹಾಗಾಗಿ ಅವರನ್ನು ಶ್ರೀ ಕಾರ್ಯನಿರ್ವಹಣಾಧಿಕಾರಿಯಾಗಿ ಹಾಗೂ ಸಪ್ತಗಿರಿಯ ಗೌರವ ಸಂಪಾದಕರಾಗಿ ಬರಲು ಸಪ್ತಗಿರಿ ಹೃತ್ಪೂರ್ವಕವಾಗಿ ಸ್ವಾಗತಿಸುತ್ತದೆ.



# ವಿಜಯದಾಸರು ಕಂಡ ತಿರುಪತಿ

---ಜಿ. ಶ್ರೀಧರ್.

ಶ್ರೀಪಾದರಾಜ ದಾಸಾರ್ಯರಿಂದ ಪುನಃ ಪ್ರಾರಂಭವಾದ ಎಲ್ಲಾ ಹರಿದಾಸರುಗಳ ಆರಾಧ್ಯಕ್ಷೇತ್ರ - ತಿರುಪತಿ. ತಿರುಪತಿಯ ಆರಾಧ್ಯದೈವವಾದ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ನುತಿಸದ ಯಾವ ದಾಸರು ಈ ಧರೆಯಲ್ಲಿ ಇಲ್ಲ. ಭಕ್ತಾಧೀನನಾದ ತಿರುಮಲೆ ಒಡೆಯ ತನ್ನ ಮಹಿಮೆಗಳಿಂದ ಈ ಹರಿದಾಸರುಗಳನ್ನು ಪಕ್ವಗೊಳಿಸಿ, ಅವರುಗಳ ಭಕ್ತಿಯನ್ನು ಸಾಣೆಗೊಳಿಸಿ, ದಾಸಸಾಹಿತ್ಯವನ್ನು ಪರಿಶುದ್ಧಗೊಳಿಸಿರುವುದು ಈ ಧರೆಯಲ್ಲಿನ ವೈಶಿಷ್ಟ್ಯವಾಗಿದೆ.

ಸಂಪ್ರದಾಯಾನುಗತ ದಾಸಸಾಹಿತ್ಯ ಇನ್ನೇನು ನಶಿಸುತ್ತೇನೋ ಎಂಬ ಆತಂಕ ಇದ್ದಾಗ ಆಧ್ಯಾತ್ಮಿಕ ಬುಗ್ಗೆಯಾಗಿ ಕಾಣಿಸಿಕೊಂಡವರು ಚೀಕಲಪರಯ ವಿಜಯದಾಸರು, ಹರಿದಾಸ ಸಾಹಿತ್ಯವನ್ನು ಉಚ್ಛ್ರಾಯಗೊಳಿಸಿದ ಪುರಂದರ ಸಾಹಿತ್ಯವನ್ನು ಪೂರ್ಣವಾಗಿ ಈಡೇರಿಸಲು ಅವತರಿಸಿದವರೇ ವಿಜಯದಾಸರು.

ವಿಜಯದಾಸರು ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತಿದ್ದ ಸಂದರ್ಭದಲ್ಲೆಲ್ಲಾ, ಅವರ ಜೊತೆಯಲ್ಲಿ ಹರಿಭಕ್ತರ ಗುಂಪು ಸದಾ ಇರುತಿತ್ತು. ಇವರಲ್ಲಿ ಓರ್ವ ಸದಾಚಾರ ಬಡವನಾದ ತರುಣನೊಬ್ಬನು ಸಹ ಇದ್ದ. ಈ ತರುಣ ಈ ಗುಂಪಿಗೆ ಸೇರಲು ಕಾರಣವೊಂದಿತ್ತು. ತೀರಾ ಬಡವನಾದ ತರುಣನು ತನ್ನ ಹೊಟ್ಟೆ ಹೊರೆದುಕೊಳ್ಳಲು ದುಸ್ತರವಾಗಿರುವಾಗ, ಇನ್ನೂ ಈತನಿಗೆ ಕನ್ಯೆಯನ್ನು ನೀಡಿದರೆ ಸಂಸಾರ ಹೇಗೆ ನಿಭಾಯಿಸಲು ಸಾಧ್ಯ ಎಂದು ಕನ್ಯಾಪಿತೃಗಳು ಹಿಂದಿರುಗುತ್ತಿದ್ದರು. ಇದರಿಂದ ತನ್ನ ಬಡತನದ ಬಗ್ಗೆ ರೋಸಿ, ತಿರುಪತಿಯ ಬ್ರಹ್ಮೋತ್ಸವಕ್ಕೆ ಹೊರಟಿದ್ದ ಈ ವಿಜಯದಾಸರ ಹರಿಭಕ್ತರ ಗುಂಪಿಗೆ ಆತ ಸೇರಿದ್ದ. ವಿಷಯ ತಿಳಿದಿದ್ದ ವಿಜಯದಾಸರು ಈ ತರುಣನ ಬಗ್ಗೆ ಆಸಕ್ತಿ ವಹಿಸಿದ್ದರು.

ಕಾಲ್ನಡಿಗೆಯಲ್ಲಿ ತಿರುಪತಿಗೆ ಹೊರಟಿದ್ದ ಹರಿಭಕ್ತರು ದಿನ ನಿತ್ಯ ಪೂಜೆ ಹಾಗೂ ಪುರಾಣ ಪ್ರವಚನಗಳಲ್ಲಿ ತೊಡಗಿರುತ್ತಿದ್ದರು. ಹೀಗಿರುವಾಗ ಒಂದು ಆಕಸ್ಮಿಕ ಘಟನೆ ನಡೆಯಿತು. ನಾಲ್ಕಾರು ರಾಜದೂತರು ಮೊಹರು ಮಾಡಿದ ಪೆಟ್ಟಿಗೆಯನ್ನು ಎತ್ತಿಕೊಂಡು ತಿರುಪತಿಗೆ ಪ್ರಯಾಣಿಸುತ್ತಿದ್ದರು. ವಿಜಯದಾಸರು ಈ ರಾಜದೂತರನ್ನು ವಿಚಾರಿಸಿದಾಗ, ಆ ರಾಜದೂತರು "ನಮಗೆ ಈ ಪೆಟ್ಟಿಗೆ ಬಗ್ಗೆ ಏನೂ ತಿಳಿಯದು. ನಮ್ಮ ರೇವಾ ಮಹಾರಾಜರು ತಿರುಮಲ ದೇವಸ್ಥಾನದ ಮೊಕ್ತೇಸರರಿಗೆ ತಲುಪಿಸಿ, ತಲುಪಿಸಿದ್ದಕ್ಕೆ ಉತ್ತರ ತನ್ನಿರಿ ಎಂದು ತಿಳಿಸಿದ್ದಾರೆ" ಎಂದು ಹೇಳಿದರು. ಯೋಗ ಮಹಿಮೆಯಿಂದ ವಿಜಯದಾಸರು ಇದರ ಪೆಟ್ಟಿಗೆಯಲ್ಲಿ ಏನಿದೆ ಎಂದು ತಿಳಿದರು. ತಮ್ಮ ಗುಂಪಿನಲ್ಲಿದ್ದ ತರುಣನನ್ನು ಸ್ವಲ್ಪ ದೂರ ಕರೆದೊಯ್ದು, ಒಂದು ಬಟ್ಟೆಯ ಗಂಟನ್ನು ನೀಡಿ, ಇವರಲ್ಲಿ ಇರುವುದನ್ನು ಮಾರಿ, ವಿವಾಹವಾಗಿ ಹರಿಸಂಕಲ್ಪದಂತೆ ಜೀವನ ನಡೆಸುವಂತೆ ತಿಳಿಸಿ, ಬೀಳ್ಕೊಟ್ಟರು ವಿಜಯದಾಸರು.

ಅತ್ತ ರಾಜದೂತರು ತಮ್ಮ ಮಹಾರಾಜ ಕಳುಹಿಸಿದ ಮೊಹರಾದ ಪೆಟ್ಟಿಗೆಯನ್ನು ತಿರುಮಲ ದೇವಸ್ಥಾನದ ಆಡಳಿತದವರಿಗೆ ತಲುಪಿಸಿ, ಉತ್ತರ ಕೊಡಲು ಕೇಳಿದರು. ಮಹಂತರು ರಾಜದೂತರಿಗೆ ಸೂಕ್ತ ಏರ್ಪಾಡುಮಾಡಿ, ಹಿಂದಿರುಗುವಾಗ ಉತ್ತರ ನೀಡುವ ಬಗ್ಗೆ ತಿಳಿಸಿದರು. ಮಹಂತರು ಮೊಹರಿನ ಪೆಟ್ಟಿಗೆ ತೆರೆದು ನೋಡಿದಾಗ, ಅದರಲ್ಲಿದ್ದ ಪತ್ರದ ಸಾರಾಂಶ ಹೀಗಿತ್ತು. 'ರೇವಾ ರಾಜನ ಪತ್ನಿ ಅತಿ ತೀವ್ರವಾದ ಖಾಯಿಲೆಯಿಂದ ನರಳುತ್ತಿದ್ದಾಗ, ವೈದ್ಯರ ಮುಖೇನವೂ ವಾಸಿಯಾಗದಾಗ, ರಾಜನು ಶ್ರೀ ವೆಂಕಟೇಶ್ವರ ಸ್ವಾಮಿಯಲ್ಲಿ ಪ್ರಾರ್ಥನೆ ಸಲ್ಲಿಸಿದನು. ರಾಣಿಯು ಗುಣಮುಖವಾದಳು. ಹರಕೆಯಂತೆ ರಾಣಿಯು ಧರಿಸಿದ್ದ ಎಲ್ಲಾ ಒಡವೆಗಳನ್ನು ಶ್ರೀ ವೆಂಕಟೇಶಸ್ವಾಮಿಗೆ ಅರ್ಪಿಸದೇಕೆಂದು ತಿಳಿಸಿದಾಗ, ರಾಣಿಯು ತಾನು ಧರಿಸಿದ ಒಡವೆಗಳು ತವರುಮನೆಯವರು ನೀಡಿದ ಸೌಮಂಗಲ ವಸ್ತುಗಳು, ಅದರ ಬದಲು ಅದರಷ್ಟೆ ಪ್ರಮಾಣದ ಒಡವೆಗಳನ್ನು ದೇವರಿಗೆ ಸಲ್ಲಿಸಲು ಏರ್ಪಾಟು ಮಾಡುವಂತೆ ರಾಜನನ್ನು ಕೋರಿದಳು. ಅದರಂತೆ ರಾಜನು ರಾಣಿಯ ಮೇಲಿದ್ದ ಒಡವೆಗಳಷ್ಟೆ ತರಹದ ಪರ್ಯಾಯ ಒಡವೆಗಳನ್ನು ಮಾಡಿಸಿ, ಪಟ್ಟಿ ಮಾಡಿ, ದೇವಸ್ಥಾನದ ಮಹಂತರಿಂದ ಪ್ರತಿಯೊಂದು ಸೇರಿದ ಬಗ್ಗೆ ಉತ್ತರ ಬಯಸಿ, ರಾಜದೂತರೊಂದಿಗೆ ತಿರುಪತಿ ದೇವಸ್ಥಾನಕ್ಕೆ ಕಳುಹಿಸಿಕೊಟ್ಟನು.

ರಾಜ-ರಾಣಿಯರು ತಿರುಪತಿಗೆ ಹೋದ ರಾಜದೂತರು ಹಿಂದಿರುಗುದಿದ್ದಾಗ, ದುಃಖಿತರಾದರು. ಶ್ರೀ ವೆಂಕಟೇಶ ಸ್ವಾಮಿಯನ್ನು ಸ್ಮರಿಸಿ, ಕನಸಿನಲ್ಲಿ ದರ್ಶನ ನೀಡುವಂತೆ ಪ್ರಾರ್ಥಿಸಿದರು. ಇವರ ಭಕ್ತಿ ಭಾವಕ್ಕೆ ಮೆಚ್ಚಿದ ಶ್ರೀ ವೆಂಕಟೇಶ ಸ್ವಾಮಿಯವರು ಕನಸಿನಲ್ಲಿ ರಾಜ-ರಾಣಿಯವರಿಗೆ ದರ್ಶನವಿತ್ತಿದ್ದರು. ಕನಸಿನಲ್ಲಿ ವೆಂಕಟೇಶಸ್ವಾಮಿದರ್ಶನ ಪಡೆದ ರಾಜ-



ರಾಣಿಯರು, ತಾವು ಕಳುಹಿಸಿದ ಎಲ್ಲಾ ಒಡವೆಗಳನ್ನು ಗಮನಿಸಿದರು. ಅದರಲ್ಲಿ ಬೆಲೆಬಾಳುವ ಮುತ್ತಿನಹಾರ ಕಾಣಿಸಲಿಲ್ಲ. ಈ ಬಗ್ಗೆ ವೆಂಕಟೇಶಸ್ವಾಮಿಯ ಗಮನಕ್ಕೆ ರಾಜ - ರಾಣಿಯರು ತಂದಾಗ, ಸಸುನಕ್ಕು ಪರಮಾತ್ಮನು, ಆ ಮುತ್ತಿನಹಾರ ನನ್ನ ಭಾಗವತ ಭಕ್ತನ ಮೂಲಕ ಬಡವನಿಗೆ ಸಮರ್ಪಿತವಾಗಿದೆ. ದೀನರಿಗೆ ಸಲ್ಲಿದ ಪ್ರತಿಯೊಂದು ಜನಾರ್ದನನಾದ ನನಗೆ ಸಲ್ಲುತ್ತದೆ ಎಂದು ತಿಳಿಸಿದನು. ಇದರಿಂದ ರಾಜ-ರಾಣಿಯರಿಗೆ ಸಂತಸವಾಯಿತು. ರಾಜ ದೂತರು ಹಿಂದಿರುಗಿ ಬಂದಿದ್ದು ನೀಡಿದ ಉತ್ತರದಲ್ಲಿ ಮುತ್ತಿನ ಹಾರ ತಲುಪಿಲ್ಲ ಎಂದು ತಿಳಿಸಲಾಗಿತ್ತು. ರಾಜ- ರಾಣಿಯರಿಗೆ ಆಗಬೇಕಾದ ದೇಸರದ ಬದಲು ಆನಂದ ಉಕ್ಕೇರಿತು. ಇದು ತಿರುಮಲ ಶ್ರೀ ವೆಂಕಟೇಶ ಸ್ವಾಮಿ ತನ್ನ ಭಾಗವತ ಭಕ್ತನ ಬಗ್ಗೆ ತೋರಿದ ಪ್ರೀತ್ಯಾದರದ ನಿದರ್ಶನವಾಗಿದೆ.

ಬ್ರಹ್ಮೋತ್ಸವಕ್ಕೆ ಬಂದ ವಿಜಯದಾಸರಿಗೆ, ಕಿಕ್ಕಿರಿದ ಜನ ಸಂದಣಿಯಿಂದ ಶ್ರೀ ವೆಂಕಟೇಶನ ದರ್ಶನ ಅಷ್ಟು ಸುಲಭಸಾಧ್ಯವಾಗಲಿಲ್ಲ. ಹರಿಭಕ್ತರ ಕೋಪ - ತಾಪದಲ್ಲೂ ಹರಿಮಹಿಮೆ ಕೊಂಡಾಡುವುದೇ ಅವರ ಕೆಲಸ. ಈ ಬಗ್ಗೆ ನಿಂದಾಸ್ತುತಿಯನ್ನು ವಿಜಯದಾಸರು ಮಾಡಿದ್ದಾರೆ. ಇದರಲ್ಲಿ ಭಗವಂತನ ಸನ್ನಿಧಾನಕ್ಕೆ ಬರುವ ಭಕ್ತರಿಗೆ ದೊರೆಯುವ ಸತ್ಸಂಗದ ಬಗ್ಗೆ ವಿವರಿಸಿದ್ದಾರೆ :--

ನಿನ್ನ ದರುಶನಕೆ ಬಂದವನಲ್ಲವೊ
ಪುಣ್ಯವಂತರ ದಿವ್ಯಚರಣ ನೋಡಲಿ ಬಂದೆ

ಎಲ್ಲೆಲ್ಲಿ ನಿನ್ನ ವ್ಯಾಪ್ತತನವು ಇರಲಿಕ್ಕೆ
ಇಲ್ಲಿಗೆ ಬರುವ ಕಾರಣವಾವುದೋ
ಸೊಲ್ಲಿಗೆ ಕಂಬದಲಿ ತೋರಿದ ಮಹಾಮಹಿಮ
ಅಲ್ಲಿ ಇಲ್ಲೇನಯ್ಯಾ ಬಲ್ಲ ಭಜಕರಿಗೆ

ಕರದಾಗಲೇ ಓಡಿ ಬಂದೊದಗುವ ಸ್ವಾಮಿ
ಮರಳಿ ಗಾವುದಯೆಣಿಸಿ ಬರಲ್ಯಾತಕೋ
ನೆರೆನಂಬಿದವರಿಗೆ ಆಪಲ್ಲಾದರೇನು
ಅರಿವವರ ಮನದೊಳಗೆ ನಿಂದಾಡುವ ಚೆಲುವ

ಕಠಿಣವೊ ನಿನ್ನ ಭಕುತರನ ನೋಡುವ ಲಾಭ
ಸಟೆಯಲ್ಲ ವೇದಗಳು ಸಾರುತಿಹವೋ
ವಟು ಮೊದಲಾದ ವೈಷ್ಣವಾಗ್ರೇಸರರಂಘ್ರಿ
ತೃಟಿಯಾದರೂ ಎನಗೆ ಸೋಕಲು ಗತಿಗೆ ದಾರಿ

ಧ್ಯಾನಕ್ಕೆ ಸಿಲುಕುವನೆ ನಿನ್ನ ಕಾಣಲಿಬಹುದು
ಜ್ಞಾನಿಗಳು ಎಂತು ಬರುವರೋ ಅಲ್ಲಿಗೆ
ಅನಂತ ಜನುಮದಲಿ ಜಪ ತಪ ಹೋಮ ವ್ರತ
ಏನೇನು ಮಾಡಿದರು ಇಷ್ಟು ಜನ ಕೂಡುವದೇ

ನೀನಿದ್ದ ಸ್ಥಾನದಲಿ ಸಕಲ ಪುಣ್ಯಕ್ಷೇತ್ರ
ನೀನಿದ್ದ ಸ್ಥಾನದಲಿ ಸರ್ವತೀರ್ಥ
ನೀನಿದ್ದ ಸ್ಥಾನದಲ್ಲಿ ಸಮಸ್ತ ತಾತ್ವಿಕರು
ನಾಸ್ತಿಕ ಬರುವುದು ನಿನಗೆ ತಿಳಿಯದೆ ಸ್ವಾಮಿ

ಇದನೆ ಲಾಲಿಸು ಜೀಯ ನಿನ್ನದೊಂದೆ ಮೂರ್ತಿ
ನಿದರುಶನವಲ್ಲವೆ ಮಿಗಿಲಾವುದೋ
ಪದೋಪದಿಗೆ ಮಧ್ವಮತ ಪೊಂದಿದ ಸುಜನರ
ಹೃದಯದೊಳಗಾನಂತಪರಿ ನಿನ್ನ ರೂಪಗಳು

ಭಳಿರೆ ತಿರುಮಲರಾಯ ನಿನ್ನ ಕರುಣಾರಸಕೆ
ನೆಲೆಗಾಣೆ ನೆಲೆಗಾಣೆ ನೆರೆಹೊರೆಯೊಳು
ಒಲಿದು ಭಕುತರಿಗಾಗಿ ಮದುವೆ ಹಮ್ಮಿಕೊಂಡೆ
ಸುಲಭ ದೇವರ ದೇವ ವಿಜಯವಿಟ್ಠಲ ವೆಂಕಟ

ಇಷ್ಟೆ ಅಲ್ಲದೇ ಶ್ರೀ ವಿಜಯದಾಸರು-- ಶ್ರೀ ವೆಂಕಟೇಶನ ದರ್ಶನಕೆ ಬರುವ ಯಾತ್ರೆಯನ್ನು ಒಂದು ವ್ರತವೆಂದು ತಿಳಿದಿದ್ದರು. ಅಂತಹುದರಲ್ಲಿ ಕರುಣಾಮಯಿಯಾದ ಇಂತಹ ಭಗವಂತನ ದರ್ಶನ ತಡವಾದುದ ಕಾರಣ - ಇಂತಹ ವ್ರತಕ್ಕೆ ಮಂಗಳವನ್ನು ಹಾಡುತ್ತಾರೆ.

ಜಯಮಂಗಳಂ ನಿತ್ಯ ಶುಭಮಂಗಳಂ
ತೊಳಸದಕ್ಕಿಯ ತಿಂಬ ಕಿಲುಬು
ತಳಿಗೆಯಲುಂಬ
ಕೊಳಗದಲಿ ಹಣಗಳ ಅಳೆಸಿಕೊಂಬ
ಇಲ್ಲ ತನಗೆಂದೊಬ್ಬ ಸುಳ್ಳು ಮಾತಾಡಿದರೆ
ಎಲ್ಲವನು ಕಸಕೊಂಬ ಕಳ್ಳ ದೊರೆಗೆ

ತನ್ನನ್ನು ನೋಡಲು ಬರುವ ಭಕ್ತರಿಂದಲೇ ಹಣವನ್ನು ಕಸಿಯುವ ದೇವರು, ತನ್ನ ದರ್ಶನ ತಡಮಾಡಿ, ಕೃಷ್ಣಾಜಿನದ ಪೆಟ್ಟು ನೀಡುವ ಈ ವೆಂಕಟೇಶನ ಮಹಿಮೆಯನ್ನು ವಿಜಯದಾಸರು ಕೊಂಡಾಡಿದ್ದಾರೆ.

ತನ್ನ ನೋಡುವೆನೆಂದು ಮುನ್ನೂರ್ಗಾವುದ ಬಂದು
ತನ್ನ ಗುಡಿಯ ಪೊಕ್ಕ ಜನರಿಗೆಲ್ಲ
ಹೊನ್ನು ಹಣ ಕಸುಕೊಂಡು ತನ್ನ
ದರುಶನ ಕೊಡದೆ
ದೆನ್ನೊಡೆಯ ಹೊಡೆಸುವ ಅನ್ಯಾಯಕಾರಿಗೆ

ಕುಳ್ಳವಾಮನನಾಗಿ ದಾನವನ್ನು ಬೇಡುತ್ತಿದ್ದ ಹರಿಯು, ಈಗ ತಿರುಮಲ ವೆಂಕಟೇಶನಾಗಿ, ತನಗೆ ಅಡ್ಡಬೀಳುವ ದಾಸರುಗಳಿಗೆ ಮುಕ್ತಿ ನೀಡಿ ದೊಡ್ಡವರನ್ನಾಗಿ ಮಾಡುವ ಬಗ್ಗೆ ಈ ರೀತಿ ಹೇಳಿದ್ದಾರೆ.

ಗಿಡ್ಡ ಹಾರುವನಾಗಿ ಒಡ್ಡಿ ದಾನವ ಬೇಡಿ
ದುಡ್ಡು ಕಾಸುಗಳಿಗೆ ಕೈಯ ನೀಡಿ
ಅಡ್ಡ ಬಿದ್ದ ದಾಸರುಗಳಿಗೆ ವಿಡ್ಡೂರಗಳ ಕಳೆದು
ದೊಡ್ಡವರ ಮಾಳ್ಪ ಸಿರಿ ವಿಜಯ ವಿಠ್ಠಲಗೆ

ಇವರ ನಿಂದಾಸ್ತುತಿಯ ಭಕ್ತಿಗೆ ಒಲಿದ ಶ್ರೀ ...ಟೇಶಸ್ವಾಮಿ ದರ್ಶನ, ವಿಜಯದಾಸರಿಗೆ ... ಠದಲ್ಲಿನ ಶ್ರೀಹರಿಯನ್ನು ದರ್ಶಿಸಿದಷ್ಟೆ ಸಂ... ಯಿತು.

ಅಪ್ಪಾರಮಹಿಮ ಅನುಪಮ್ಯಚರಿತ
ಸುಪ್ಪಾರ ಸನ್ನ ಸುಪ್ಪಾರನ ವಾಹನ್ನ
ಅಪ್ಪಾ ತಿಮ್ಮಪ್ಪ ಎನ್ನಪ್ಪ ತಿರುವೆಂಗಳಪ್ಪ
ಅಪ್ಪಾರಮಹಿಮ ಸುಪ್ಪಾರಸದಾ
ಅಪ್ಪಾ ಇತ್ತರೆತಪ್ಪ ವಿಜಯವಿಠ್ಠಲ ಸಾ-
ರಪ್ಪಗಿರಿವಾಸ ಸುಪ್ಪಾರ ವಾಣೀಶ

ತಿರುಪತಿಯ ಬ್ರಹ್ಮೋತ್ಸವಕ್ಕೆ ಬಂದಿದ್ದ ... ಯದಾಸರು, ಅಲ್ಲಿ ಇದ್ದಷ್ಟುಕಾಲವು ಪ... ತ್ಮನ ದರ್ಶನ ದಿನನಿತ್ಯ ಪಡೆಯುತ್ತಿದ್ದರು. ... ಊರಿಗೆ ಹಿಂದಿರುಗುವ ದಿನದಲ್ಲಿ, ಮೊ... ಕೋಪ ಬಂದ ಸನ್ನಿವೇಶ ನೆನಸಿಕೊಂಡು ಪಶ್ಚಾ... ಪಟ್ಟರು.

ನಿನ್ನ ನೋಡಲಿ ಬಂದೆ ನಿತ್ಯತೃಪ್ತ
ಅನ್ಯರಿಂದಲೇ ಎನಗೆ ಏನು ಪ್ರಯೋಜನ

ದರುಶನಕೆ ಬಂದವ ನಾನಲ್ಲೆಂದು ನಾನ...
ಹರಿ ನಿನಗೆ ನುಡಿದಿದ್ದು ಮನಸಿನೊಳಗೆ
ಇರುತಿಪ್ಪದೇನಯ್ಯಾ ಬಿನ್ನಪವ ಲಾಲಿಸು
ಶರಣ ಜನರ ಅಭಿಪ್ರಾಯ ಒಂದು
ಬಗೆಯಿಪ್ಪ...

ಹಣ - ಹೊನ್ನು ಸುಲಿಯುವ ದೆ... ನೀನೆಂದು ಹಿಯ್ಯಾಳಿಸಿದ ಬಗ್ಗೆಯೂ ವಿಜ... ಸರು ಕ್ಷಮೆ ಕೋರುತ್ತಾರೆ. ಚಿನ್ಮಯ ರೂಪಿ... ಪರಮಾತ್ಮನನ್ನು ಭಕ್ತಿಯಿಂದ ಪ್ರಾರ್ಥಿಸುತ್ತಾ...

ಹೊನ್ನು ಹಣ ತೂಗಬೇಕಾದರೆ ಮೊದಲೆ
ಚಿನ್ನ ಹಾಕುವರೇನೋ ಚಿನ್ಮಯರೂಪ
ಮುನ್ನೆ ನಿನ್ನವರ ದರುಶನವಾದ ಮೇಲೆ ...
ವನಶರೀರ ನಿನ್ನ ಕಾಂಬುವದುಚಿತ

ಸ್ಥೂಲ ಮತಿಯಿಂದ ಪೇಳಿದನೆಂದು ಚಿನ...
ಲಾಲಿಸು ಲಲಿತಾಂಗಿಲಕುಮಿರಮಣ
ನೀಲಗಿರಿವಾಸ ವಿಜಯವಿಠ್ಠಲ ವೆಂಕಟ
ನೋಲಗವ ಕೈಕೊಳ್ಳು ಎನ್ನ ಯೋಗ್ಯಿ ತವ...

ವಿಜಯದಾಸರು ಭಕ್ತಿ ಪರವಶರಾಗಿ ಶ್ರೀ... ಟೇಶನ ಸನ್ನಿಧಾನದಲ್ಲಿ ಕೀರ್ತನೆಗಳನ್ನು ಹಾಡಿ... ಯರಾದರು. ಪರಮಾತ್ಮ ತನ್ನ ಭಕ್ತರಿಗೆ ಸ... ವಾಗಿ ಒಲಿದು ಉದ್ಧರಿಸುವ ಎನ್ನುವುದಕ್ಕೆ ಇದ... ನಿದರ್ಶನ ಮತ್ತೊಂದಿಲ್ಲ.

(ಆ...



# ಲೀಲಾ ಮಾನುಷ ವಿಗ್ರಹ



---ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳು.

"ದ್ವಾರಾವತೀಂ ಸಕಲ ಭಾಗ್ಯವತೀಮುಪೇಕ್ಷ್ಯ ರಜತಪೀಠಪುರಂ ಗರೀಯ" ಎಂಬುದಾಗಿ ಶ್ರೀ ವಾದಿರಾಜ ಶ್ರೀಮಚ್ಚರಣರು ವರ್ಣಿಸಿದಂತೆ ಸಕಲ ಸಂಪತ್ಪೂರಿತವಾದ ದ್ವಾರಕೆಯನ್ನು ಉಪೇಕ್ಷಿಸಿ, ಶ್ರೀಮಧ್ವಾಚಾರ್ಯರಿಗೆ ಒಲಿದು ಬಂದು ಶ್ರೀಕೃಷ್ಣ ನೆಲೆಸಿದ ಕ್ಷೇತ್ರ ಈ ಉಡುಪಿ ಕ್ಷೇತ್ರ. ಮಂಥಪಾಶಧರನಾಗಿ ನಿಂತು ಸಂಸಾರಸಾಗರದಲ್ಲಿರುವ ಭಕ್ತರ ದುರಿತಗಳನ್ನು ಕಡೆದು ಅಭೀಷ್ಟಗಳನ್ನು ಕೊಡುತ್ತಿರುವನು.

ದ್ವಾಪರ ಯುಗದಲ್ಲಿ ವಸುದೇವ - ದೇವಕಿಯರ ಎಂಟನೆಯ ಮಗನಾಗಿ ಅವತರಿಸಿದ ಶ್ರೀಕೃಷ್ಣನ ಮುಖ್ಯ ಉದ್ದೇಶ ದುರ್ಜನರನ್ನು ನಾಶಮಾಡಿ ಸಜ್ಜನರನ್ನು ಉದ್ಧರಿಸುವುದು. ಅವತಾರವನ್ನು ತಾಳದೆಯೇ ದುರ್ಜನರನ್ನು ನಾಶಮಾಡುವುದಕ್ಕೆ ಮತ್ತು ಸುಜನರನ್ನು ಉದ್ಧರಿಸುವುದಕ್ಕೆ ಸಾಮರ್ಥ್ಯವಿದ್ದರೂ ಆತ ಲೀಲೆಗೋಸ್ಕರ ಅವತರಿಸುತ್ತಾನೆ.

ತಾನು ಚಿಕ್ಕವನಿರುವಾಗಲೇ ಪೂತನಾ ಮೊದಲಾದ ದುಷ್ಟರನ್ನು ಕೊಂದು ಸಜ್ಜನರನ್ನು ರಕ್ಷಿಸಿದನು. ದೊಡ್ಡವನಾದ ಮೇಲೂ ನರಕಾಸುರ ಮೊದಲಾದವರನ್ನು ಕೊಂದು ಸಜ್ಜನರಿಗೆ ರಕ್ಷಣೆಯನ್ನು ನೀಡಿದನು. ಹೀಗೆ ಕೆಲವು ಸಲ ತಾನೇ ದುಷ್ಟರನ್ನು ಸಂಹರಿಸಿದರೆ, ಕೆಲವು ಸಲ ತನ್ನ ಭಕ್ತಾಗ್ರೇಸರರಾದ ವಾಯುದೇವರ ಮೂಲಕ ನಡೆಸಿ ಸಜ್ಜನರನ್ನು ರಕ್ಷಿಸುವನು. ವಾಯುದೇವರೇ ಭೀಮಸೇನನಾಗಿ ಬಂದಾಗ ಜರಾಸಂಧ, ಬಕ, ಹಿಡಿಂಬ, ಕಿರ್ಮೀರ, ದುರ್ಯೋಧನ ಮೊದಲಾದವರನ್ನು ಅವನಿಂದ ಕೊಲ್ಲಿಸಿದನು. ಹೀಗೆ ದುಷ್ಟಶಿಕ್ಷಣ ಶಿಷ್ಟರಕ್ಷಣದ ಹಿನ್ನೆಲೆಯಲ್ಲಿ ತಾನು ಅವತಾರ ತಾಳುತ್ತೇನೆ ಎನ್ನುವುದಾಗಿ ಗೀತೆಯಲ್ಲಿ "ಯದಾ ಯದಾ ಹಿ ಧರ್ಮಸ್ಯ" ಎಂಬುದಾಗಿ ತಿಳಿಸಿದ್ದಾನೆ.

ಇದಲ್ಲದೇ ಲೋಕಶಿಕ್ಷಣವೂ ಆತನ ಅವತಾರದ ಉದ್ದೇಶವಾಗಿದೆ. ತಾನೂ ಕೂಡಾ ಸಾಮಾನ್ಯ ಮನುಷ್ಯನು ಎನ್ನುವ ಭ್ರಮೆ ಹುಟ್ಟುವಂತೆ ಮಾಡುತ್ತಾನೆ. ಆತನ ಪ್ರತಿಯೊಂದು ಲೀಲೆಯೂ ಮಾನುಷಲೀಲೆಯಾಗಿಯೇ ಕಾಣುವುದು. ಆದರೆ ಆ ಲೀಲೆಗಳಲ್ಲಿರುವ ನೈಜ ವಿಚಾರವನ್ನು ಜ್ಞಾನಿಗಳು ಅರಿತಿರುತ್ತಾರೆ.

ತನ್ನ ಪ್ರತಿಯೊಂದು ವ್ಯಾಪಾರದಲ್ಲಿಯೂ ಮಾನವ ಹೀಗೆ ಇರಬೇಕು ಎನ್ನುವುದನ್ನು ತೋರಿಸುತ್ತಾನೆ. ಕಂಸನನ್ನು ಕೊಂದು ಮುಗಿಸಿದರೂ ಸಮಗ್ರ ರಾಜ್ಯಾಧಿಕಾರ ತನಗೆ ಸಿಕ್ಕಿದರೂ ಆ ಅಧಿಕಾರವನ್ನು ಸ್ವೀಕರಿಸಲಿಲ್ಲ. ಆ ಮೂಲಕ ಮಾನವ ಅಧಿಕಾರಕ್ಕೆ ಆಸೆ ತೋರಿಸಬಾರದು ಎಂದು ತೋರಿಸಿದನು. ಸಾಮಾನ್ಯ ನರನಂತೆ ತಾನೂ ಕೂಡಾ ಪ್ರಾತಃಕಾಲದಲ್ಲಿ ಅಹ್ನಿಕಾದಿಗಳನ್ನು ಮಾಡುವುದರ ಮೂಲಕ ಈ ರೀತಿ ಇರಬೇಕೆನ್ನುವುದನ್ನು ತಿಳಿಸಿದನು. ತನ್ನ ಎದುರುಗಡೆಯಲ್ಲಿಯೇ ಬಂಧುಗಳು ಮರಣ ಹೊಂದುತ್ತಿದ್ದರೂ, ಅದಕ್ಕೆ ಸ್ಪಂದಿಸದೇ ನಿರ್ವಿಕಾರನಾಗಿ ನಿಂತಿದ್ದನು. ಹಾಗೆಯೇ ಜೀವನದಲ್ಲಿ ಇರಬೇಕು, ಎನ್ನುವುದಾಗಿ ತಾನು ನಡೆದು ತಿಳಿಸಿದನು. ಆದುದರಿಂದಲೇ "ಲೀಲಾ ಮಾನುಷ ವಿಗ್ರಹ" ಎಂದು ಆತನಿಗೆ ಬಿರುದಿದೆ.

ಅಲ್ಲದೇ ಶ್ರೀಕೃಷ್ಣ ಅವತಾರ ಕಾಲದಲ್ಲಿ ಜ್ಞಾನಕಾರ್ಯವನ್ನೂ ನಡೆಸಿದ್ದಾನೆ. ಜೀವನದಲ್ಲಿ ತಿಳುವಳಿಕೆಯ ಮಹತ್ವವನ್ನು ಗೀತೆಯ ಮೂಲಕ ಪ್ರತಿಪಾದಿಸಿದ್ದಾನೆ. ಫಲಕ್ಕೆ ಹಾತೊರೆದು ಕರ್ಮ ಮಾಡಬಾರದು ಅಂತ ಅರ್ಜುನನಿಗೆ ಬೋಧಿಸಿದನು. ಮಾಡುವ ಕೆಲಸ ಭಗವದಾರಾಧನಾರೂಪದಲ್ಲಿರಬೇಕು ಎಂಬುದನ್ನು ಉಪದೇಶಿಸಿದನು. ಉದ್ಧವನ ಮೂಲಕ ಮತ್ತೊಂದು ಗೀತೆಯನ್ನು ಜಗತ್ತಿಗೆ ನೀಡಿದನು. ಭೀಷ್ಮಾಚಾರ್ಯರ ಅಂತ್ಯ ಕಾಲದಲ್ಲಿ ಅವರ ಮೂಲಕ ಧರ್ಮರಾಜನಿಗೆ ಉಪದೇಶ ಮಾಡಿಸಿದನು. ಹೀಗೆ ವಿಪುಲವಾಗಿ ಜ್ಞಾನ ಕಾರ್ಯವನ್ನು ನಡೆಸಿದ್ದಾನೆ.

ತನ್ನನ್ನು ನಂಬಿದ ಪಾಂಡವರನ್ನು ಎಂದೆಂದೂ ಆತ ಕೈಬಿಡಲಿಲ್ಲ. ತನ್ನನ್ನು ನಂಬಿ ಪ್ರಾಮಾಣಿಕತೆಯಿಂದ ಬದುಕುತ್ತಿರುವವರ ಹಿಂದೆ ತಾನಿದ್ದೇನೆ ಎನ್ನುವುದನ್ನು ಪಾಂಡವರ ನಿದರ್ಶನದ ಮೂಲಕ ತೋರಿಸಿದ್ದಾನೆ. ಹೀಗೆ ಒಂದೊಂದು ಕೆಲಸದಲ್ಲಿಯೂ ಲೋಕ ಶಿಕ್ಷಣ ಮತ್ತು ಆಧ್ಯಾತ್ಮಿಕ ಸಂದೇಶ ಎದ್ದು ಕಾಣುವುದು. ಅವೆರಡನ್ನೂ ಜೀವನದಲ್ಲಿ ಅಳವಡಿಸಿಕೊಂಡು ಬದುಕುವಂತಾಗಬೇಕು. ಇದೇ ಶ್ರೀಕೃಷ್ಣ ಜನ್ಮಾಷ್ಟಮಿಯ ಆಚರಣೆಯ ಹಿಂದಿರುವ ನಿಜವಾದ ಉದ್ದೇಶ. ಈ ಉದ್ದೇಶ ಸಾಕಾರಗೊಳ್ಳಲಿ ಎಂದು ಆಶಿಸುತ್ತಾ ಈ ಶುಭ ಸಂದರ್ಭದಲ್ಲಿ ಎಲ್ಲರಿಗೂ ಮಂಗಳವಾಗಲಿ ಎಂದು ಶ್ರೀಕೃಷ್ಣನಲ್ಲಿ ಪ್ರಾರ್ಥಿಸುತ್ತೇವೆ.








ಕಂಚಿ ಪರಮಾಚಾರ್ಯಸ್ವಾಮಿ

# ನವಜೀವನ ಅಂಧರ ಸಹಾಯ ಕೇಂದ್ರ (ನೋಂ)

## (ವೃದ್ಧರ, ಅಂಧರ ಉಚಿತ ಆವಾಸ ಕೇಂದ್ರ)

## 2-21 ಅ. ಸಪ್ತಗಿರಿ ಆಶ್ರಮ

## ತಿರುಚಾನೂರು - ತಿರುಪತಿ - 517 503.

# ಮ ನ ವಿ

ಕಂಚಿಕಾಮಕೋಟಿ ಪೀಠದ ಶ್ರೀ ಶಂಕರಾಚಾರ್ಯರ ವಿಶೇಷ ಅನುಗ್ರಹದಿಂದ ಕಳೆದ 16 ವರ್ಷದಿಂದ ನವಜೀವನ ಆಶ್ರಮ ನೇತ್ರಹೀನರಿಗೆ ವೃದ್ಧರಿಗೆ ಅನೇಕ ಸಹಾಯ ಕಾರ್ಯಗಳನ್ನು ನಿರ್ವಹಿಸುತ್ತಿದೆ.

**ದಾನಗಳಲ್ಲಿ ಶ್ರೇಷ್ಠದಾನ ಅನ್ನದಾನ :** ಎಲ್ಲ ದಾನಗಳಲ್ಲೂ ಅನ್ನದಾನ ಶ್ರೇಷ್ಠವೆಂದು ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಅದರಲ್ಲೂ ತಿರುಪತಿ, ರಾಮೇಶ್ವರ ಕಾಶಿ ಮೊದಲಾದ ಪುಣ್ಯಸ್ಥಳಗಳಲ್ಲಿ ಮಾಡುವ ಅನ್ನದಾನದಿಂದ ದಾತರಿಗೆ ದೊಡ್ಡ ಪುಣ್ಯಫಲ ಲಭಿಸುತ್ತದೆ.

**ನಾರಾಯಣಸೇವೆ :** ತಿರುಪತಿಯ ನವಜೀವನ ಆಶ್ರಮದಲ್ಲಿ ನಾರಾಯಣ ಸೇವೆಯಾಗಿ ನಿತ್ಯವೂ ಮೂರುಹೊತ್ತು ದಾತರ ನೆರವಿನಿಂದ ನೇತ್ರಹೀನರಿಗೆ, ವೃದ್ಧರಿಗೆ, ಅನಾಥರಿಗೆ ಅನ್ನದಾನ ನಡೆಯುತ್ತಿದೆ. ಒಂದು ದಿನದ ಅನ್ನದಾನಕ್ಕೆ ಸುಮಾರು ರೂ. 500/- ವೆಚ್ಚವಾಗುತ್ತಿದೆ. ದಯೆಯುಳ್ಳ ದಾನಿಗಳು ತಮ್ಮ ಹುಟ್ಟಿದ ದಿನ, ವಿವಾಹದ ದಿನ, ಮಕ್ಕಳ ಜನ್ಮದಿನ, ಅಥವಾ ಕೀರ್ತಿಶೇಷರಾದವರ ಪುಣ್ಯತಿಥಿಯಯಂದು ಒಂದು ದಿನದ ಅನ್ನದಾನಕ್ಕೆ ರೂ. 500/- ವಂತಿಗೆಯನ್ನು ನೀಡಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಆಶೀರ್ವಾದ ಹೊಂದಬೇಕೆಂದು ಕೋರುತ್ತೇವೆ.

ಅನ್ನದಾನ ಮಾಡುವ ದಾತರ ಗೋತ್ರನಾಮಗಳೊಡನೆ ಶ್ರೀ ವೆಂಕಟೇಶ್ವರಸ್ವಾಮಿ, ಅಲಮೇಲು ಮಂಗಮ್ಮವರಲ್ಲಿ ಪ್ರಾರ್ಥನೆ ಸಲ್ಲಿಸಿ ಪ್ರಸಾದವನ್ನು ಪೋಸ್ಟ್ ಮೂಲಕ ಕಳುಹಿಸಲಾಗುವುದು. ದಾತರು ತಮ್ಮ ವಂತಿಗೆಗಳನ್ನು ಚೆಕ್, ಡಿ.ಡಿ., ಎಂ.ಓ. ಗಳ ಮೂಲಕ ನವಜೀವನ ಬ್ಲೈಂಡ್ ರಿಲೀಫ್‌ಸೆಂಟರ್ ತಿರುಪತಿ - ಇವರ ಹೆಸರಿಗೆ ಕಳುಹಿಸಬೇಕೆಂದು ಕೋರುತ್ತೇವೆ.

**|| ಶ್ರೇಯೋ ಭೂಯಾತ್ ಸಕಲ ಜನಾನಾಮ್ ||**

ಫೋನ್ - 25992,
ನವಜೀವನ ಅಂಧರ ಸಹಾಯಕೇಂದ್ರ,
ಸಪ್ತಗಿರಿ ಆಶ್ರಮ - ತಿರುಚಾನೂರು,
ತಿರುಪತಿ - 517 503

ಮಾನವ - ಮಾಧವ ಸೇವೆಯಲ್ಲಿ
**ಸ್ವಾಮಿ ಶ್ರೀಧರ ಆಚಾರ್ಯ**
ಸಂಸ್ಥಾಪಕರು / ಅಧ್ಯಕ್ಷರು.

# ದಸರಾ ಇತಿಹಾಸದಲ್ಲಿ

---ಶ್ರೀ ಸಿ. ಗೋವಿಂದಾಚಾರ್.

ಮಹಿಷನ ಊರು ಮೈಸೂರು, ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ, ಒಂದು ಐತಿಹಾಸಿಕ, ಸುಂದರ ಹಾಗೂ ಹೆಮ್ಮೆಯ ನಗರ. ಮೈಸೂರು ಮತ್ತು ದಸರಾ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಉತ್ಸಾಹಭರಿತ ಮೈಸೂರು ಜನರಿಗೆ ಈ ದಸರಾ ಬಹು ಸಂಭ್ರಮದ ಹಾಗೂ ಸಡಗರದ ಹಬ್ಬವಾಗಿದೆ. ಸಾಂಸ್ಕೃತಿಕ ದೃಷ್ಟಿಯಿಂದ ಮೈಸೂರು ವಿಜಯನಗರದ ಉತ್ತರಾಧಿಕಾರಿಯಾಯಿತು. ವಿಜಯನಗರದ ಸಾಮ್ರಾಜ್ಯದಿಂದ ಉಡುಗೊರೆಯಾಗಿ ಬಂದ ಈ ದಸರೆಯು ಮೈಸೂರು ಅರಸರಿಗೆ ಶಾಸ್ತ್ರೋಕ್ತವಾದ ಹಾಗೂ ಸಾಂಸ್ಕೃತಿಕ ಚಟುವಟಿಕೆಯಾಗಿತ್ತು. ದಸರಾ ಆಚರಣೆ ಪ್ರಾಚೀನವಾಗಿದ್ದರೂ, ಮೈಸೂರಿನಲ್ಲಿ ಆರಂಭವಾಗಿದ್ದು ರಾಜಒಡೆಯರ ಕಾಲದಲ್ಲಿ (ಕ್ರಿ.ಶ. ೧೬೧೦) ಪ್ರಥಮ ದಸರ ಆಚರಣೆ ಮಾಡಿದವರು ದಿವಾನ್ ಪೂರ್ಣಯ್ಯನವರ ನೇತೃತ್ವದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು. ಪ್ರಜೆಗಳೆಲ್ಲರೂ ದಸರೆಯೆಂಬ ಸಿಹಿಯನ್ನು ಸವಿಯಬೇಕೆಂಬ ಆಸೆಯಿಂದ ರಾಜರ್ಷಿ ನಾಲ್ವಡಿ ಕೃಷ್ಣ ರಾಜ ಒಡೆಯರು ಇದನ್ನು ಹೆಚ್ಚು ಆಕರ್ಷಣೀಯವಾಗಿ ಮಾಡಿ ವಿಖ್ಯಾತಗೊಳಿಸಿದರು. ಜಯ ಚಾಮರಾಜ ಒಡೆಯರ ಕಾಲದಲ್ಲಿ ಅಂತ್ಯವಾಯಿತು. ಕರ್ನಾಟಕದಿಂದ ಇಡೀ ಭಾರತಕ್ಕೆ ವ್ಯಾಪಕವಾಗಿರುವ ಈ ಹಬ್ಬವನ್ನು ಪಶ್ಚಿಮ ಬಂಗಾಳ, ರಾಜಾಸ್ಥಾನ, ಮಹಾರಾಷ್ಟ್ರ, ದೆಹಲಿ ಇತ್ಯಾದಿಯಾಗಿ ದೇಶಾದ್ಯಂತ ಆಚರಿಸಲಾಗುತ್ತಿದೆ. ಮೈಸೂರಿನ ಸಾಂಸ್ಕೃತಿಕ ಪರಂಪರೆಯನ್ನು ಎತ್ತಿ ತೋರಿಸುವ ಒಂದು ಕನ್ನಡಿ ಈ ದಸರ. ಇದಕ್ಕೆ ಸಾಟಿಯಾದ ಬೇರೊಂದು ನಾಡ ಹಬ್ಬ ಇಲ್ಲ. ಈ ಆಧುನಿಕ ಹಾಗೂ ಪ್ರಜಾ ಪ್ರಭುತ್ವಯುಗದಲ್ಲಿ ಮಹಾರಾಜ, ಸಿಂಹಾಸನ, ದರ್ಬಾರ್ ಇತ್ಯಾದಿಗಳು ಆಕ್ಷೇಪಣೀಯವಾಗಿದ್ದರೂ ಶಾಸ್ತ್ರೋಕ್ತರೀತಿಯಲ್ಲಿ ದಸರೆಯು ಅನೇಕ ದಶಕಗಳಿಂದ ನಡೆದುಬಂದಿದೆ. ಇದಕ್ಕೆ ಕಾರಣ ಅರಸರ ಬಗ್ಗೆ ಜನರಿಗಿರುವ ಗೌರವ ಮತ್ತು ಅಭಿಮಾನ. ಉದಾ : ೧೯೫೬ ರಲ್ಲಿ 'ಇದೇ ಕೊನೆಯ ದಸರಾ' ಎಂಬ ವದಂತಿಯಿಂದ ಸರಾಸರಿಗಿಂತ ಹತ್ತು ಪಟ್ಟು ಹೆಚ್ಚು ಸಂಖ್ಯೆಯಲ್ಲಿ ಜನರು ಸೇರಿದ್ದರು. ಮೈಸೂರು ಚರಿತ್ರೆಯಲ್ಲೇ ದಸರಾಗೆ ಇಷ್ಟೊಂದು ಜನ ಸೇರಿರಲಿಲ್ಲ. ಜನರಿಗೆ, ಅರಮನೆ ಒಂದು ಕೇಂದ್ರಸ್ಥಾನ. ಶ್ರಾವಣ ಮಾಸದಲ್ಲಿ ಹತ್ತು ದಿನಗಳು ಕೃಷ್ಣೋತ್ಸವ, ಅಂಧಕಾಸುರ ಸಂಹಾರ (ದೆಹಲಿಯ ರಾಮಲೀಲ ಮೈದಾನದಲ್ಲಿ ನಡೆಯುವ ರಾವಣ ಸಂಹಾರದ ರೀತಿಯಲ್ಲಿ) ಮತ್ತು ದಸರಾ ಕಾರ್ಯಕ್ರಮಗಳಲ್ಲಿ ಹೆಚ್ಚಾಗಿ ಸ್ಥಳೀಯಜನರು ಇರುತ್ತಿದ್ದರು. ದಸರಾ ಬಂದರೆ, ಎಲ್ಲರಿಗೂ ಸಡಗರ, ಹೋಟೇಲ್, ವಸತಿಗೃಹಗಳಿಗೆ ಹಾಗೂ ಸಿನಿಮಾಮಂದಿರಗಳಿಗೆ ಒಳ್ಳೆಯ ಲಾಭದಾಯಕವ್ಯಾಪಾರ, ಪ್ರಮುಖ ಕಟ್ಟಡಗಳಿಗೆ ಸುಣ್ಣ ಬಣ್ಣ, ರಸ್ತೆ ಬೀದಿಗಳನ್ನು ಸ್ವಚ್ಛಗೊಳಿಸುವುದು, ವಸ್ತು ಪ್ರದರ್ಶನ, ಅನೇಕ ಚೌಕಗಳಲ್ಲಿ ತಮಾಷೆ ಕಾರ್ಯಕ್ರಮಗಳು ಬಿಡುವಿಲ್ಲದೆ ಸಾಗುತ್ತಿದ್ದುವು. ಎಲ್ಲಾ ಶಾಲೆಗಳಿಗೂ ಮತ್ತು ವಿದ್ಯಾಸಂಸ್ಥೆಗಳಿಗೂ ಹತ್ತು ದಿನ ರಜ ಘೋಷಿಸಲಾಗುತ್ತಿತ್ತು.

ದಸರಾ ಎಂಬ ಪದವು 'ದಶಹರಾ' ಎಂಬ ಪದದಿಂದ ಬಂದಿದೆ. ದಶಶಿರ ದೈತ್ಯನಾದ ರಾವಣನಿಗೆ ಇದು ಅನ್ವಯಿಸುವುದು. ಹತ್ತು ದಿನಗಳು ಅಥವಾ ನವರಾತ್ರಿ ಎಂದು ಅರ್ಥ. ಈ ನವರಾತ್ರಿಯಲ್ಲಿ ಮೊದಲನೆಯ ಮೂರು ದಿವಸಗಳು ಲಕ್ಷ್ಮಿಯನ್ನು ಎರಡನೇ ಮೂರು ದಿವಸಗಳನ್ನು ಸರಸ್ವತಿಯನ್ನು



## ತಿರುಮಲೆ - ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳಿಂವರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಯಾತ್ರಿಕಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಂಡು ದೇವರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಕೋರಲಾಗಿದೆ.

ತಿ. ತಿ. ದೇವಸ್ಥಾನಗಳು,
--ತಿರುಪತಿ.

ಮತ್ತು ಮೂರನೆ ಮೂರು ದಿವಸಗಳು ದುರ್ಗೆಯನ್ನು ಪೂಜಿಸುವುದು ವಾಡಿಕೆಯಲ್ಲಿದೆ. ನವ ದುರ್ಗೆ ಮತ್ತು ಚಾಮುಂಡೇಶ್ವರಿ ದಸರೆಯ ಮುಖ್ಯ ದೇವತೆಗಳು. ಇಲ್ಲಿ ಬರುವ ಅಷ್ಟಮಿಯೇ ದುರ್ಗಾಷ್ಟಮಿ. (ಕಲ್ಕತ್ತೆಯಲ್ಲಿ ಬಹಳ ವಿಜೃಂಭಣೆ). ಸರಸ್ವತೀ ಪೂಜೆಯನ್ನು ನಾಲ್ಕನೇ ದಿನವೂ ಮತ್ತು ಹಯಗ್ರೀವ ಪೂಜೆಯನ್ನು ಒಂಬತ್ತನೇ ದಿನ ಆಚರಿಸಲಾಗುವುದು. ಕೆಲವು ಸಂವತ್ಸರದಲ್ಲಿ ದಶರಾತ್ರಿ ಸಂಭವಿಸುತ್ತಿತ್ತು. ಎಲ್ಲಾ ಜಾತಿಯವರೂ ಈ ಹಬ್ಬವನ್ನು ಆಚರಿಸುವರು. ಇಲ್ಲಿ ಬರುವ ಮಹಾಲಯ ಅಮಾವಾಸ್ಯೆ ಪಿತೃಪಕ್ಷ ಎಂಬ ಒಂದು ಪುಣ್ಯಕರ್ಮವನ್ನು ಎಲ್ಲಾ ಹಿಂದುಗಳೂ ಮಾಡುವರು. ದಿವ್ಯ ಕ್ಷೇತ್ರಗಳಲ್ಲಿ ವಿಶೇಷ ಪೂಜೆ ಉತ್ಸವಗಳು ಜರುಗುವುವು. ಉದಾ : ತಿರುಪತಿಯಲ್ಲಿ ನವರಾತ್ರಿ ಬ್ರಹ್ಮೋತ್ಸವ, ವೆಂಕಟೇಶ ಜಯಂತಿ, ದೇಶಿಕರ ತಿರುನಕ್ಷತ್ರ ಮತ್ತು ಶೃಂಗೇರಿಯಲ್ಲಿ ಶರನ್ನವರಾತ್ರಿ. ಪುಟ್ಟಮಕ್ಕಳಿಗೆ ಬಹಳ ಸಂಭ್ರಮ. ಮನೆ ಮನೆಗಳಲ್ಲಿ ಬೊಂಬೆಗಳನ್ನು ಇಡುವುದು ಮತ್ತೊಂದು ಸಂಪ್ರದಾಯ.

## ಪಾಡ್ಯ-ದಶಮಿ :

ಮೈಸೂರು ಅರಸರ ಕುಲದೇವತೆ ಶ್ರೀ ಚಾಮುಂಡೇಶ್ವರಿ. ಈ ಹತ್ತು ದಿನಗಳಲ್ಲಿ ಪ್ರತಿದಿನ ಬೆಳಿಗ್ಗೆ ಅರಮನೆಯ ಕನ್ನಡಿ ತೊಟ್ಟಿಯಲ್ಲಿ ಚಾಮುಂಡೇಶ್ವರಿ ಉತ್ಸವಮೂರ್ತಿಗೆ ಘನ ಕುಂಕುಮಾರ್ಚನೆ ಮತ್ತು ವಿಶೇಷ ಪೂಜೆ ನೆರವೇರುವುದು. ಸಂಗೀತ ನೃತ್ಯ ಕಾರ್ಯಕ್ರಮವೂ ಇರುವುವು. ರಾಜಗುರುಗಳಾದ ಬ್ರಹ್ಮತಂತ್ರ ಪರಕಾಲ ಯತಿವರ್ಯರಿಂದ ಆಶೀರ್ವಾದ ಮತ್ತು ಫಲಮಂತ್ರಾಕ್ಷತೆಗಳನ್ನು ಪಡೆದು, ಪಾಡ್ಯದಂದು ಬೆಳಿಗ್ಗೆ ಶುಭಮುಹೂರ್ತದಲ್ಲಿ ಇಪ್ಪತ್ತೊಂದು ಕುಶಾಲ ತೋಪುಗಳ ಉಡಾವಣೆಯೊಂದಿಗೆ ಮಹಾರಾಜರು ಸಿಂಹಾಸನಾರೋಹಣ ಮಾಡುವರು. ೬ ಸಾವಿರ ತೊಲ ಚಿನ್ನದ ಹೊದ್ದಿಕೆಯಿರುವ ರತ್ನಖಚಿತವಾದ ಈ ಸಿಂಹಾಸನದಲ್ಲಿ ಇಬ್ಬರು ಕೂರಬಹುದು. ಮಹಾರಾಜರು ಪೀತಾಂಬರಧಾರಿಯಾಗಿ ಪೂಜಾಗೃಹದಿಂದ ದರ್ಬಾರ್ ಸಭಾಂಗಣಕ್ಕೆ ಪರಿವಾರ ಸಮೇತ ಪಂಜು, ದೀವಟಿಗೆ, ನಡೆಮುಡಿ ಇತ್ಯಾದಿಯಾಗಿ ಸಕಲ ಮರ್ಯಾದೆಗಳೊಂದಿಗೆ ಗಂಭೀರ ನಡಿಗೆಯಿಂದ ಬಂದು ಸಿಂಹಾಸನವನ್ನು ಮೂರು ಬಾರಿ ಪ್ರದಕ್ಷಿಣೆಮಾಡಿ, ಆರತಿಯನ್ನು ಬೆಳಗಿ, ನಮಸ್ಕಾರಮಾಡಿ ಬುಧಸ್ತೋಮದ ವೇದಘೋಷದೊಂದಿಗೆ ಸಿಂಹಾಸನಾರೋಹಣ ಮಾಡುವರು. ಅರಮನೆ ಇಂಗ್ಲೀಷ್ ಬ್ಯಾಂಡ್ ವಾದ್ಯದವರು-

ಕಾಯೌ ಶ್ರೀಗೌರಿ
ಕರುಣಾಲಹರಿ ತೋಯಜಾಕ್ಷಿ ಶಂಕರೀಶ್ವರಿ
ಶ್ರೀಜಯಚಾಮುಂಡಿಕೆ,
ಶ್ರೀಜಯಚಾಮೇಂದ್ರ
ನಾಮಾಂಕಿತ ಭೂಮೀಂದ್ರ
ಲಲಾಮನ ಮುದದೆ

ಎಂಬ ರಾಜ್ಯಗೀತೆಯನ್ನು ನುಡಿಸುವರು. ದರ್ಬಾರ್ ಸಭಾಂಗಣದ ಮುಂಭಾಗದ ಎರಡೂ ಕಡೆಗಳಲ್ಲಿ ಪಂಚರಂಗಿನ ನಿಶಾನೆಯನ್ನು ಚಕ್ರದಂತೆ ತಿರುಗಿಸುವರು. ಶ್ರೇಷ್ಠ ಮರ್ಯಾದೆಗಳಲ್ಲಿ ಇದೂ ಒಂದು. ಮಹಾರಾಜರು ವಂದನೆ (ಸೆಲ್ಯೂಟ್) ಮಾಡಿ ಕುಳಿತುಕೊಳ್ಳುವರು. ಸಿಂಹಾಸನದ ಛತ್ರಿಯನ್ನು ಅರ್ಧಕ್ಕಿಳಿಸಲಾಗುವುದು. ನಾಲ್ಕು ಜನ ಹೊಗಳು ಭಟ್ಟರು 'ಪರಾಕು' ಹೇಳುವರು. ಪೋಲೀಸ್ ರಿಜರ್ವ್ ಪಡೆಗಳಿಂದ ಆಕಾಶದ ಕಡೆಗೆ ಮೂರು ಬಾರಿ ಗುಂಡಿನ ಸುರಿಮಳೆಯಾಗುವುದು. ರಾಜ್ಯಗೀತೆಯನ್ನು ಪುನಃ ಹಾಡಲಾಗುವುದು. ನಂತರ ವಿವಿಧ ಸೇನಾಪಡೆಗಳಿಂದ ಕವಾಯಿತು ಜರುಗುವುದು. ಮಹಾರಾಣಿಯವರು ಘೋಷಾವಸ್ಥೆಯಲ್ಲಿ ನಜರ್ (ಮುಜರೆ) ಒಪ್ಪಿಸಿದ ಮೇಲೆ ರಾಜ್ಯಗೀತೆಯೊಂದಿಗೆ ಮಹಾರಾಜರು ಸಿಂಹಾಸನವನ್ನಿಳಿದು ಸ್ವಗೃಹಕ್ಕೆ ತೆರಳುವರು.

ಪ್ರತಿದಿನ ಸಂಜೆಯ ಕಾರ್ಯಕ್ರಮ ಈ ಕೆಳಕಂಡಂತೆ ಇತ್ತು.

(೧) ಏಳು ಘಂಟೆಗೆ 'ಭುಗ್' ಎಂಬಂತೆ ದೀಪಾಲಂಕಾರಸಮೇತ ರಾಜರ ಸಿಹಾಸನಾರೋಹಣ. ಇದನ್ನು ನೋಡಿ "ಭೂಮಿಗಿಳಿದ ಸ್ವರ್ಗವೇ!" ಎಂದು ವಿದೇಶಿಯರು ಬೆರಗಾಗುತ್ತಿದ್ದರು. ಬಣ್ಣದ ಬಾವುಟ ತಿರುಗಿಸುವುದು, ಚಾಮರ ಬೀಸುವುದು, ಪರಾಕು ಹೇಳುವುದು, ಬ್ಯಾಂಡ್ ವಾದ್ಯದಿಂದ 'ಕಾಯೌ ಶ್ರೀಗೌರಿ' - ಎಲ್ಲವೂ ಏಕಕಾಲದಲ್ಲಿ.

(೨) ಅರಮನೆಯ ಒಳಾಂಗಣವು ಅಲ್ಲಲ್ಲಿ ನೀರಿನ ಚಿಲುಮೆ, ಸಿಮೆಂಟ್ ಮತ್ತು ಹುಲ್ಲಿನ ಮೈದಾನಗಳಿಂದ ಕೂಡಿದೆ. ವಿಶೇಷವಾಗಿ ನಿರ್ಮಿತವಾದ ಅಖಾಡಾದಲ್ಲಿ ಕುಸ್ತಿಪಂದ್ಯಾವಳಿಯಾಗುವುದು. ಅದರ ಪಕ್ಕದಲ್ಲಿ ಯಂತ್ರಚಾಲಿತವಾದ ವೇದಿಕೆಯಲ್ಲಿ ಸಂಗೀತ ಕಛೇರಿಯಾಗುವುದು. ವಿದ್ವಾಂಸರು ಆಸೀನರಾದ ಈ ವೇದಿಕೆಯು 'ಲಿಫ್ಟ್' ಮೂಲಕ ಮೇಲಕ್ಕೆ ಸಭಾಂಗಣದ ಸಮಕ್ಕೆ ಮತ್ತು ದೊರೆಗಳಿಗೆ ಗೋಚರವಾಗುವಂತೆ ಬರುವುದು. ಇಪ್ಪತ್ತು ನಿಮಿಷಗಳ ನಂತರ 'ಲಿಫ್ಟ್' ಕೆಳಗಿಳಿಯುವುದು. ಪ್ರಾಚೀನ ಕಾಲದಿಂದಲೂ ಮೈಸೂರು

ಅರಸರು ವಿದ್ಯೆ ಮತ್ತು ಕಲೆಗೆ ಅಮಿತವಾದ ಪ್ರೋತ್ಸಾಹವನ್ನು ಕೊಡುತ್ತಿದ್ದರು. ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರು ಬಹು ಸಂಗೀತ ಪ್ರಿಯರು. ಇವರು 'ಪೋರಿ' ಎಂಬ ವಾದ್ಯವನ್ನು ನುಡಿಸುತ್ತಿದ್ದರು. ಭಾರತದ ಹಲವಾರು ಕಡೆಗಳಿಂದ ಕಲಾವಿದರು ಮೈಸೂರಿಗೆ ಬಂದು ದೊರೆಗಳ ಮುಂದೆ ತಮ್ಮ ಪ್ರೌಢಿಮೆಯನ್ನು ಪ್ರದರ್ಶಿಸಿ ಉತ್ತೇಜನ, ಮೆಚ್ಚಿಗೆ ಹಾಗೂ ಅಮೂಲ್ಯವಾದ ಬಹುಮಾನವನ್ನು ಪಡೆಯುತ್ತಿದ್ದರು. ಉದಾ : ಟೈಗರ್ ವರದಾಚಾರ್ಯರು, ವೀಣೆ ಶೇಷಣ್ಣ, ಸುಬ್ಬಣ್ಣ, ಭಕ್ತಿಸುಬ್ಬಣ್ಣ, ವೀಣೆ ವೆಂಕಟಗಿರಿಯಪ್ಪ, ಪಿಟೀಲು ಚೌಡಯ್ಯ, ಬಿಡಾರಂ ಕೃಷ್ಣಪ್ಪ, ದೇವೇಂದ್ರಪ್ಪ - ಇತ್ಯಾದಿ. ವಿಶ್ವ ವಿಖ್ಯಾತ ಚಿತ್ರಕಲಾನಿಪುಣ ರಾಜಾರವಿವರ್ಮ ಮತ್ತು ಇವರ ಸಹೋದರ ರಾಮವರ್ಮ ಸಹ ನಾಲ್ವಡಿಯವರ ಕಾಲದಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸಿದ್ದಾರೆ. ಇವರ ಅನೇಕ ಚಿತ್ರಕೃತಿಗಳು ಈಗಲೂ ಇವೆ.

(೬) ಅರಮನೆಗೆ ಒಟ್ಟು ಆರು ದ್ವಾರಗಳಿವೆ. ಪೂರ್ವಕ್ಕಿರುವುದೇ ಮಹಾದ್ವಾರ - ಜಯಮಾರ್ತಾಂಡ. ಇದರ ಸಮೀಪದಲ್ಲಿ ಸೋಮೇಶ್ವರ ದೇವಾಲಯವಿದೆ. ಇಲ್ಲಿ ಶಮೀವೃಕ್ಷವೂ ಇದೆ. ಇಲ್ಲಿಂದ ವಿಶೇಷ ಮದ್ದಳೆ, ತಮಟೆ, ಕರ್ನಾಟಕ ಸಂಗೀತ ವಾದ್ಯಗೋಷ್ಠಿ, ಅಲಂಕಾರಕುದುರೆಗಳು ಮತ್ತು ಸೈನ್ಯ ಸಮೇತ ರಾಜಾಶ್ವ ಮತ್ತು ಪಟ್ಟದಾನೆ ಮೆರವಣಿಗೆ ಹೊರಟು ಸುಮಾರು ಏಳೂನಲವತ್ತಕ್ಕೆ ದರ್ಬಾರ್ ಸಭಾಂಗಣದ ಮುಂದೆ ಬರುವುದು. ರಾಜಾಶ್ವವು ಕತ್ತನ್ನು ಬಗ್ಗಿಸಿ ನಮಸ್ಕಾರ ಮಾಡುವುದು. ಪಟ್ಟದಾನೆಯು ಸೊಂಡಿಲಿನಿಂದ ಒಂದು ದೊಗಸೆ ಹೂವನ್ನು ತೆಗೆದುಕೊಂಡು ಮಾಹಾರಾಜರಿಗೆ ಎರಚುವುದು. ಗೌರವ ಸೂಚಕವಾಗಿ ಎಲ್ಲರೂ ಎದ್ದು ನಿಲ್ಲುವರು. ಮಹಾರಾಜರು ಕುಳಿತಲ್ಲೇ ನಮಸ್ಕಾರಮಾಡುವರು. ಅವರು ಹಾಗೆ ಮಾಡುವಾಗ ಅವರ ಎಂಟು ಬೆರಳುಗಳಿಗೆ ಹಾಕಿಕೊಂಡಿರುವ ನವರತ್ನಖಚಿತ ಉಂಗುರಗಳು ಫಳಫಳನೆ ಹೊಳೆಯುವುದು.

ದರ್ಬಾರ್ ಸಭಾಂಗಣವು ಬಹಳ ವಿಸ್ತಾರವಾಗಿದೆ. ಎರಡೂ ಕಡೆಗಳು ಸೇರಿ ಸುಮಾರು ಒಂದು ಸಾವಿರ ಜನರು ಕುಳಿತುಕೊಳ್ಳಬಹುದು. ಪ್ರಜೆಗಳು ವಿಶೇಷ ಪೋಷಾಕಿನೊಂದಿಗೆ (ಬಿಳೀಶರಾಯಿ, ಕರಿಯ ಉದ್ದನೆಕೋಟು, ಮಡಿಕೆಯ ಉತ್ತರೀಯ ಮತ್ತು ಬಿಳೀ ಪೇಟ) ಇಪ್ಪತ್ತು ನಿಮಿಷಗಳ ಮುಂಚೆಯೇ ಬಂದು ಆಸೀನರಾಗಬೇಕು. ಅರಸು ಕುಟುಂಬದವರಿಗೆ ಅವರವರ ಸ್ಥಾನಕ್ಕೆ ತಕ್ಕಂತೆ ವಿವಿಧ ಬಣ್ಣಗಳ ಉಡುಪುಗಳು ಇರುತ್ತವೆ. ಭಾಗವತರು ಶಾಸ್ತ್ರಿಗಳು ಮತ್ತು ವೇದವಿದ್ವಾಂಸರುಗಳು ಕಚ್ಚೆ, ಶಾಲು ಮತ್ತು ಪೇಟ ಒಳಗೊಂಡ ಉಡುಪಿನಲ್ಲಿ ಬರಬೇಕು. ಪರಿವಾರದಲ್ಲಿ ಏಳುವರೆ ಅಡಿ ಉದ್ದವಿರುವ ಇಬ್ಬರು ವ್ಯಕ್ತಿಗಳು ಎಲ್ಲರ ಗಮನವನ್ನೂ ಸೆಳೆಯುತ್ತಿದ್ದರು. ವಿದೇಶಿಯರು ಪೂರ್ತ 'ಸೂಟ್‌ನಲ್ಲಿ' ಬರಬೇಕು.

(೭) ಮಹಾರಾಜರು ಸಿಂಹಾಸನದಿಂದ ನಿವೃತ್ತಿಯಾಗುವುದಕ್ಕೆ ೧೫ ನಿಮಿಷಗಳ ಮುಂಚೆ 'ಪ್ರಜೆಗಳು' ಮರ್ಯಾದೆ ಮತ್ತು ಮುಜರೆಯನ್ನು ಒಪ್ಪಿಸಬಹುದು. ಸಭೆಯ ಪ್ರತಿಯೊಂದು ಸಾಲಿನಲ್ಲಿ ಕುಳಿತಿರುವವರು ಕ್ರಮವಾಗಿ ಎದ್ದುನಿಂತು ನಮಸ್ಕಾರ ಮಾಡಬೇಕು. ಮುಜರೆಗಾಗಿ ಸಾಲಾಗಿ ನಿಲ್ಲಬೇಕು. ಪುಷ್ಪ ಅಥವ ಬೆಳ್ಳಿ ನಾಣ್ಯಗಳನ್ನು ತಟ್ಟೆಯಲ್ಲಿಟ್ಟುಕೊಂಡು ಮಹಾರಾಜರ ಮುಂದೆ ನಿಂತು ನಮಸ್ಕಾರ ಮಾಡಬೇಕು. ರಾಜರು ಇದನ್ನು ಮುಟ್ಟುವರು. ಸರಸ್ವತಿ ಪೂಜೆ ಮತ್ತು ದುರ್ಗಾಷ್ಟಮಿ ಕಾರ್ಯಕ್ರಮಗಳು ಸ್ವಗೃಹದಲ್ಲೇ ನಡೆಯುವುದು. ಇವುಗಳಲ್ಲಿ ಸಾರ್ವಜನಿಕರಿಗೆ ಪ್ರವೇಶವಿಲ್ಲ.

(೮) ಒಂಭತ್ತನೇ ದಿನ ಆಯುಧಪೂಜೆ. ವಿಶೇಷವಾಗಿ ನಿರ್ಮಾಣವಾದ ವೇದಿಕೆಯಲ್ಲಿ ಮಹಾರಾಜರು ನಿಂತುಕೊಂಡು ಪಟ್ಟದಾನೆ, ರಾಜಾಶ್ವ, ಪಟ್ಟದ ಕತ್ತಿ, ರಥ ಮತ್ತು ಖಾಸಾಮೋಟರ್ ಕಾರುಗಳಿಗೆ ಪರಿಮಳ ಗಂಧಾಕ್ಷತೆ ಮತ್ತು ಪುಷ್ಪಗಳಿಂದ ಪೂಜಿಸುವರು. ಈ ಕಾರ್ಯಕ್ರಮದ ಅವಧಿ ೪೫ ನಿಮಿಷಗಳು. ಛಳಿ, ಮಳೆ, ಬಿಸಿಲು ಲಕ್ಷ್ಯವಿಲ್ಲ ಮೈಸೂರು ಜನರಿಗೆ.

(೯) ೧೦ ನೇ ದಿನ ಬೆಳಿಗ್ಗೆ ೨೦ ನಿಮಿಷಗಳ ಕಾರ್ಯಕ್ರಮ, ದೇವರು, ಪಟ್ಟದಾನೆ, ರಾಜಾಶ್ವ, ಪಟ್ಟದ ಕತ್ತಿ ಇತ್ಯಾದಿಗಳನ್ನು ಮಹಾರಾಜರು ಸೈನ್ಯ ಸಮೇತ ಬನ್ನಿ ಮಂಟಪಕ್ಕೆ (ಸುಮಾರು ೫ ಕಿ.ಮಿ. ದೂರವಿದೆ.) ಕಳುಹಿಸಿಕೊಡುವುದು ಮತ್ತು ಅರಮನೆ ಒಳಾಂಗಣದಲ್ಲಿ ಮಹಾರಾಜರಿಂದ ಸ್ವಲ್ಪ ದೂರ ಕುದುರೆ ಸವಾರಿಯಾಗುವುದು. ಹಿಂದೆ ಈ ರೀತಿಯ ಕುದುರೆ ಸವಾರಿ ವರ್ಧಂತಿಯಂದು ನಡೆಯುತ್ತಿತ್ತು. ಕ್ರಮೇಣ ಬೆಳ್ಳಿರಥಕ್ಕೆ ಬದಲಾಯಿಸಿತು. ನಂತರ ಎರಡೂ ಕಾರ್ಯಕ್ರಮಗಳನ್ನು ನಿಲ್ಲಿಸಲಾಯಿತು.

## ವಿಜಯದಶಮಿ :

ಎಲ್ಲಾ ಶುಭಕಾರ್ಯಗಳಿಗೆ ಬಹಳ ಪ್ರಶಸ್ತವಾದ ಈ ದಿನಕ್ಕೆ ಪೌರಾಣಿಕ ಹಾಗೂ ಐತಿಹಾಸಿಕ ಪ್ರಾಮುಖ್ಯತೆಯಿದೆ. "ದುಷ್ಟ ಶಿಕ್ಷಣ ಶಿಷ್ಟರಕ್ಷಣ" ದಸರೆಯ ಪೌರಾಣಿಕ ಹಿನ್ನೆಲೆ, ರಾವಣ, ಮಹಿಷಾಸುರರು ವಧೆಯಾದದ್ದು ಈ ದಿನ. ಅರ್ಜುನ ವಿಜಯ ಸಾಧಿಸಿದ್ದು ಈ ದಿನ ಎಂದು ಮಹಾಭಾರತದಲ್ಲಿ ಉಲ್ಲೇಖವಿದೆ. ರಾಜರು ದಿಗ್ವಿಜಯಕ್ಕೆ ಹೊರಡುವ ದಿನವಿದು. ರಾಜರು ಸೈನ್ಯಪರಿವಾರ ಸಮೇತ ಊರ ಹೊರಗೆ ಉತ್ತರ ದಿಕ್ಕಿಗೆ ಹೋಗಿ ಶಮೀಪೂಜೆಯನ್ನು ಮಾಡುವುದು ಈ ದಿನ. ಬನ್ನಿಮರದ ಎಲೆ ಕೀಳುವುದು ಮತ್ತು ಹಂಚುವುದು ವಿಜಯದ ಮತ್ತು ಸ್ನೇಹ ಸೌಹಾರ್ದತೆಯ ಸಂಕೇತವಾಗಿದೆ.

ಶಮೀಶಮಯತೇ ಪಾಪಂ
ಶಮೀಶತ್ರು ನಿಬರ್ಹಣಂ
ಅರ್ಜುನಸ್ಯ ಧನುರ್ಧಾರೀ
ರಾಮಸ್ಯ ಪ್ರಿಯದರ್ಶಿನೀ

## ಪರಮೋತ್ಸವ-ಜಂಬೂಸವಾರಿ :

ವಿಶೇಷ ಅಲಂಕೃತವಾದ ಆನೆಯ ಮೇಲಿರುವ ಸ್ವರ್ಣದ ಅಂಬಾರಿಯಲ್ಲಿ ಮಹಾರಾಜರು ಕುಳಿತು ಬನ್ನಿಮಂಟಪಕ್ಕೆ ಹೋಗುವ ಮೆರವಣಿಗೆ ವಿಶ್ವದಲ್ಲೇ ಅದ್ವಿತೀಯ ಮತ್ತು ಅತ್ಯದ್ಭುತವಾದದ್ದು. ಇದೇ ದಸರೆಯ ಪ್ರಮುಖ ಆಕರ್ಷಣೆ. ಈ ಆಕರ್ಷಣೆಗೆ ಎರಡು ಕಾರಣಗಳಿವೆ. ೧) ಮಹಾರಾಜರನ್ನು ಸಮೀಪದಲ್ಲಿ ದರ್ಶನಮಾಡಬಹುದು. ೨) ಮಹಾರಾಜರ ಆಕಾರ, ಮುಖಕಾಂತಿ, ತೇಜಸ್ಸು, ಅವರ ಪೀತಾಂಬರ - ಜರತಾರಿ ಉಡುಪುಗಳು ಸಿರಿಪೇಟ ತುರಾಯಿ ಆಭರಣಗಳು ಇತ್ಯಾದಿ. "ವಿಷ್ಣುವಿನ ತೇಜಸ್ಸುಳ್ಳ ರಾಜ ರಾಜ್ಯಲಕ್ಷ್ಮಿಯ ಅಪರಾವತಾರ" ಎಂದು ಲೋಕಾಭಿಪ್ರಾಯವಿದೆ. "ನಾ ವಿಷ್ಣುಃ ಪೃಥಿವೀಪತಿಃ" (ಪರಾಶರಸ್ಮೃತಿ). ಈ ರೀತಿಯಲ್ಲಿ ಮಹಾರಾಜರನ್ನು ಸಮೀಪದಲ್ಲಿ ನೋಡುವುದು ದಸರಾ ನಂತರ ಬರುವ ಚಾಮುಂಡೇಶ್ವರಿಯ ರಥ ಮತ್ತು ತೆಪ್ಪೋತ್ಸವ (ಇಲ್ಲಿ ಅವರಿಗೆ ಭಾಗವತರ ಉಡುಪು ಇರುತ್ತದೆ) ಮತ್ತು ವಿಶ್ವವಿದ್ಯಾಲಯದ ಘಟಿಕೋತ್ಸವಗಳಲ್ಲಿ (ಇಲ್ಲಿ ಮಹಾರಾಜರ ಉಡುಪು ಬಿಳಿಯ ಶರಾಯಿ, ಉದ್ದನೆಯ ಕೋಟು, ವೆಲ್ವೆಟ್ ಗೌನ್ ಮತ್ತು ಬಟ್ಟಾ ಜರಿಯ ಕೆಂಪು ಬಣ್ಣದ 'ಕ್ಲಬ್' ಪೇಟ ಬಹಳ ರಮ್ಯವಾಗಿರುವುದು.)

ಒಂದು ಶುಭಮುಹೂರ್ತದಲ್ಲಿ ಕುಶಾಲತೋಪುಗಳ ಉಡಾವಣೆಯೊಂದಿಗೆ ಪ್ರಭುಗಳು ಅಂಬಾರಿಯಲ್ಲಿ ಆಸೀನರಾಗುವರು. ಉನ್ನತ ಅಧಿಕಾರಿಗಳು ಮತ್ತು ಪ್ರಮುಖ ವ್ಯಕ್ತಿಗಳು ಆ ಸಂದರ್ಭದಲ್ಲಿ ಹಾಜರಿರುವರು. ಈ ಮೆರವಣಿಗೆಯ ಅವಧಿ ಸುಮಾರು ೩ ಘಂಟೆಗಳು. ಇದರ ಚಲನೆಯನ್ನು ನಿಯಂತ್ರಿಸಲು ಇಬ್ಬರು ಕುದುರೆ ಸವಾರರನ್ನು ನೇಮಕ ಮಾಡಲಾಗಿರುತ್ತದೆ. ಮೆರವಣಿಗೆಯನ್ನು ಈ ರೀತಿ ಸಜ್ಜು

ಗೊಳಿಸಲಾಗಿತ್ತು - ನಂದಿಕಂಬ - ಎರಡು ಜೊತೆ ಒಂಟೆಗಳು, ಆನೆಗಳು (ನಗಾರಿ ಸಮೇತ) ಸೇವಾ ದಳ, ಬಾಲಕ ಪಡೆ (ಸ್ಕೌಟ್) ಮಿಲಿಟರಿ ಪಡೆ, ಮಧ್ಯೆ ಮಧ್ಯೆ ಚಾರಿತ್ರಿಕ, ಸಾಂಸ್ಕೃತಿಕ ಕೃಷಿ ಮತ್ತು ಕೈಗಾರಿಕಾ ಪ್ರಗತಿಗಳನ್ನು ಸೂಚಿಸುವ ಸ್ತಬ್ಧ ಚಿತ್ರ ಪ್ರತಿಮೆಗಳು (ಟ್ಯಾಬ್ಲೊ) ಎನ್. ಸಿ. ಸಿ., ಪೋಲೀಸ್ ರಿಜರ್ವ್‌ದಳ, 'ಪಂಚರಂಗಿ ಪಡೆ, ಕರ್ನಾಟಕ ಸಂಗೀತ ವಾದ್ಯಗೋಷ್ಠಿ - 'ಮೈಸೂರ್ ಬಾಡಿಗಾರ್ಡ್ಸ್', 'ಮೈಸೂರ್ ಹಾರ್ಸಸ್', ಮತ್ತು 'ಲ್ಯಾನ್ಸರ್', ಎಂಬ ಮೂರು ವಿಧವಾದ ಅಶ್ವದಳ, ಇಂಗ್ಲಿಷ್ ಬ್ಯಾಂಡ್ ಸೆಟ್, ಮಹಾರಾಜರ ಖಾಸಗಿ ಸೈನ್ಯ, ನಾದಸ್ವರ, ಪ್ರಮುಖ ವ್ಯಕ್ತಿಗಳು, ಶಂಖ, ಚಕ್ರಾಂಕುಶ, ಮತ್ಸ್ಯ ಸಿಂಹ, ಶಾರ್ದೂಲ, ಗಂಡಭೇರುಂಡ, ಬಿರುದಂ ತೆಂಬರಗಂಡ ಇತ್ಯಾದಿ ಯಾಗಿ ಬಿರುದು ಖಿಲ್ಲತ್ತು ಮತ್ತು ಮರ್ಯಾದೆಗಳು, ಆನೆಗಾಡಿ (ಅರಸುಗಳಿಗೆ ಮಾತ್ರ) ಬೆಳ್ಳಿಗಾಡಿ, ಪಂಚಕಳಶದ ಗಾಡಿ, ಮಹಾರಾಜರ ಖಾಸಾ ಮೋಟರ್‌ಕಾರುಗಳು (ರೋಲ್ಸ್ ರಾಯ್ಸ್ ಮತ್ತು ಡೇಮ್ಲರ್) ಮಳೆ ಬಂದರೆ ರಕ್ಷಣೆಗೋಸ್ಕರ ಚಲಿಸುವ ಮಂಟಪ ಮತ್ತು ಕೊನೆಯದಾಗಿ ನಗಾರಿ ಸಮೇತ ಎರಡು ಜೊತೆ ಆನೆಗಳು. ಮೆರವಣಿಗೆಯನ್ನು ನೋಡಲು ದಾರಿಯುದ್ದಕ್ಕೂ ಲಕ್ಷಾಂತರ ಜನರು ಕಿಕ್ಕಿರಿದು ನಿಂತಿರುತ್ತಿದ್ದರು. ಫಲಪುಷ್ಪಹಾರ ಸಮರ್ಪಣೆ ಮಾಡಲು ಅಲ್ಲಲ್ಲಿ ಮಂಟಪಗಳಿರುತ್ತಿತ್ತು. ಸಂಜೆ ಟಾರ್ಚ್ ಪರೇಡ್ ಎಂಬ ಕವಾಯಿತು ಕಾರ್ಯಕ್ರಮ (ದಸರೆಯ ಮತ್ತೊಂದು ಆಕರ್ಷಣೆ) ಮತ್ತು ಸಾಂಪ್ರದಾಯಕ ಪೂಜಾನಂತರ ಅರಮನೆಗೆ ಮರಳಿ ಬರುವ ಮೆರವಣಿಗೆಗೆ ಇನ್ನೂ ಹೆಚ್ಚು ರಮ್ಯವಾಗಿರುತ್ತಿತ್ತು. ಇದರಲ್ಲಿ ಎರಡು ಅಧಿಕ ಆಕರ್ಷಣೆಗಳು ಇರುವುವು. (೧) ಬೆಳಿಗ್ಗೆ ಮಹಾರಾಜರು ಬನ್ನಿಮಂಟಪಕ್ಕೆ ಕಳುಹಿಸಿಕೊಟ್ಟ ದೇವರು, ಪಟ್ಟದಾನೆ, ಸೈನ್ಯ ಇತ್ಯಾದಿಗಳು ಸೇರಿಕೊಳ್ಳುವುದು. (೨) ರಾಜ್ಯದ ವಿದ್ಯುತ್ ಮಂಡಳಿಯವರು ಮಾಡಿರುವ ಶ್ರೇಷ್ಠ ಮಟ್ಟದ ದೀಪಾಲಂಕಾರ - ದಾರಿಯುದ್ದಕ್ಕೂ ದೀಪ, ಚೌಕಗಳಲ್ಲಿ ಬಣ್ಣ ಬಣ್ಣದ ಬಲ್ಬುಗಳ ಮಂಟಪಗಳು ಮತ್ತು ಚಾಮುಂಡೀಬೆಟ್ಟದಲ್ಲಿ 'ಸುಸ್ವಾಗತ' ದೀಪಾಕ್ಷರಗಳು. ಇವುಗಳನ್ನು ನೋಡಿದ ಪ್ರಾವಾಸಿಗರು, "ರಾತ್ರಿ ಹಗಲು ವ್ಯತ್ಯಾಸವೇ ಇಲ್ಲ" ಎಂದು ಬೆರಗಾಗುತ್ತಿದ್ದರು. ಈ ಹತ್ತು ದಿನಗಳಲ್ಲಿ ನಗರವೆಲ್ಲ ಇಡೀ ರಾತ್ರಿ ಎಚ್ಚರವಾಗಿರುತ್ತಿತ್ತು. ಅನೇಕ ವರ್ಷಗಳ ಹಿಂದೆ ಮಹಾರಾಜರು ಮರಳಿ ಬರುವ ಮೆರವಣಿಗೆಯಲ್ಲಿ ಆನೆಗೆ ಬದಲು ಬೆಳ್ಳಿಯ ರಥದಲ್ಲಿ ಬರುತ್ತಿದ್ದರು. ಒಮ್ಮೆ ತೆರೆದ ಕಾರಿನಲ್ಲಿ ಮೆರವಣಿಗೆಯಾಗಿತ್ತು. ೧೯೭೦-೭೧-೭೨ ರಲ್ಲಿ ದಸರೆಯು ಬಹಳ ಸರಳ ರೀತಿಯಲ್ಲಿ ನಡೆದು ಅರಮನೆಯಲ್ಲಿರುವ ಸೋಮೇಶ್ವರ ದೇವಾಲಯದಲ್ಲಿ ಶಮೀಪೂಜೆ ನಡೆಯಿತು. ದರ್ಬಾರ್ ಕಾರ್ಯಕ್ರಮಗಳು ಅಂಬಾವಿಲಾಸ ತೊಟ್ಟಿಯಲ್ಲಿ ನಡೆಯಿತು. ಇವುಗಳಲ್ಲಿ ಸಾರ್ವಜನಿಕರಿಗೆ ಪ್ರವೇಶವಿಲ್ಲ.

ಈಗ ಎರಡು ದಶಕಗಳಲ್ಲಿ ವೈಭವ ಪೂರಿತವಾದ ದಸರೆಯಲ್ಲಿ ವ್ಯತ್ಯಾಸ ಕಂಡುಬಂದಿದೆ. ರಾಜಧನ ಮತ್ತು ಹಕ್ಕು ಬಾಧ್ಯತೆಗಳು ರದ್ದಾಯಿತು. ಇದರಿಂದ ಶಾಸ್ತ್ರೋಕ್ತ ಹಾಗೂ ಇತಿಹಾಸಿಕ ದಸರೆ ರದ್ದಾಯಿತು. ದರ್ಬಾರ್ ಇಲ್ಲ. ಮಹಾರಾಜರ ಬದಲು ಭುವನೇಶ್ವರಿಯ ಪ್ರತಿಮೆ ಮೆರವಣಿಗೆ ಜಾರಿಗೆ ಬಂತು. ಈ ವಿಷಯದಲ್ಲಿ ಜನರ ಅಭಿಪ್ರಾಯ ಸ್ವಾರಸ್ಯವಾಗಿದೆ. ವರ್ಷದಿಂದ ವರ್ಷಕ್ಕೆ ಶಾಸ್ತ್ರೋಕ್ತವಾದ ದಸರ ಕ್ಷೀಣವಾಗಿ ಈಗ ಸರ್ಕಾರವೇ (ದಸರಾಸಮಿತಿ) ಒಂದು ಜನತಾ ಹಬ್ಬದಂತೆ ಈ ನಾಡಹಬ್ಬವನ್ನು ತನ್ನ ನೇತೃತ್ವದಲ್ಲಿ ಆಚರಿಸಿದರೂ, ಹಿಂದಿನ ವೈಭವ ಇದರಲ್ಲಿ ಕಾಣುವುದಿಲ್ಲ. ಧ್ರುವತಾರೆಯಂತೆ ಅದು ಆಕಾಶದ ನಕ್ಷತ್ರ ಸಮೂಹದಲ್ಲಿ ಸೇರಿ ಬೆರೆತು ಹೋಗಿದೆ. ಬರುವ ಪೀಳಿಗೆಗೆ ಅದೊಂದು ಗತ ವೈಭವವಾಗಿ, ಚರಿತ್ರೆಯಲ್ಲಿ ಸೇರಿ ಸ್ಮಾರಕವಾಗುವುದರಲ್ಲಿ ಸಂಶಯವಿಲ್ಲ. ☆



# ಪ್ರಣವ ಉಪಾಸನೆ

---ಕೆ. ಸಿ. ರಾಮಚಂದ್ರಶರ್ಮಾ.

"ಹರಿಃ ಓಂ" ಹರಿಃ - ಎಂದರೆ ಉಚ್ಚರಿಸುವವನ ಸಕಲ ಪಾಪಗಳನ್ನು ಪರಿಹರಿಸತಕ್ಕವ್ನು, ಓಂ ಎಂದರೆ ಸಕಲಗುಣ ಪರಿಪೂರ್ಣನೂ, ಸರ್ವಗುಣಾತೀತನೂ ಆಗಿರುವ ಪರಮಾತ್ಮನೆಂದು ಅರ್ಥವಾಗುತ್ತದೆ. ಈ ಓಂಕಾರವು ಸಕಲ ವೇದಮಾತೆಯಾದ ಗಾಯತ್ರೀಯ ಸಮಾನಾರ್ಥವನ್ನು ವಿವೃತಾರ್ಥವನ್ನು ತಿಳಿಸತಕ್ಕದ್ದಾಗಿದೆ. ಓಂ ಎಂಬ ಪದಕ್ಕೆ ಅಂಗೀಕರಿಸುವುದೆಂಬರ್ಥವನ್ನು ಕೊಟ್ಟು, ಭೂಲೋಕಾದ್ಯಭಿಮಾನಿ ದೇವತೆಗಳು ತಾನು ಮಾಡುವ ಆಹ್ನಿಕಗಳನ್ನು ಒಪ್ಪಲೆಂದು ಶ್ರದ್ಧಾಭಕ್ತಿ ಪುರಸ್ಸರವಾಗಿ ಆ ದೇವತೆಗಳಿಗೆ ತಾನು ಮಾಡುವ ಕರ್ಮಗಳನ್ನು ತಿಳಿಯಪಡಿಸಲು ಓಂಕಾರವನ್ನು ಪ್ರಾರಂಭದಲ್ಲಿ ಪ್ರಯೋಗಿಸಿದೆ ಎಂದು ಶಾಸ್ತ್ರಗಳು ತಿಳಿಸುತ್ತದೆ.

ಎಲ್ಲರಿಗಿಂತಲೂ ಮುಂಚೆ ಹುಟ್ಟಿದ ಪ್ರಜಾಪತಿಯು ಎಲ್ಲ ಲೋಕಗಳ ಸಾರವೇನೆಂದು ತಿಳಿಯಲು ತಪಸ್ಸನ್ನಾಚರಿಸಿದನು. ಕೊನೆಗೆ ಭೂಃ ಭುವಃ ಸುವಃ ಎಂಬ ವ್ಯಾಹೃತಿಗಳೇ ಅದೆಂದು ಗೊತ್ತಾಯಿತು. ಆ ವ್ಯಾಹೃತಿಗಳ ಸಾರವೇನೆಂದು ತಿಳಿಯಲು ಪುನಃ ಅವುಗಳನ್ನು ಕುರಿತು ತಪಸ್ಸನ್ನಾಚರಿಸಿದನು. ಅವುಗಳ ಸಾರವು ಓಂಕಾರವೆಂದು ಗೊತ್ತಾಯಿತು. ಆದ್ದರಿಂದ ಆ ಸರ್ವಸ್ವವೂ ಓಂಕಾರವೇ ಎಂದು ಛಾಂದೋಗ್ಯದಲ್ಲಿ ವರ್ಣಿಸಿದ್ದಾರೆ. ಇದು ಪರಮಾತ್ಮನಿಗೆ ಅತ್ಯಂತ ಸಮೀಪವಾದದ್ದು. ಅವನ ಹೆಸರು. ಇದನ್ನು ಉಚ್ಚರಿಸಿದರೆ ಅವನು ಪ್ರಸನ್ನನಾಗುತ್ತಾನೆ. ಈ ಪ್ರಪಂಚವು ಓಂಕಾರದೊಳಗೆ ದೆರೆತಿದೆ. ಓಂಕಾರದ ಗಾಯತ್ರೀಯ ವಿಶದೀಕರಣವೇ ಪುರುಷಸೂಕ್ತ, ಪುರುಷಸೂಕ್ತದ ವ್ಯಾಖ್ಯಾನವೇ ವೇದಗಳು ಎಂದು ಓಂಕಾರದ ತತ್ವವನ್ನು ಪ್ರಾಜ್ಞರು ಹೇಳುತ್ತಾರೆ.

ಓಂ - ಎಂದರೆ ರಕ್ಷಿಸುವುದೆಂದರ್ಥ (ಅವತಿ, ಇತಿ ಓಂ) ಯಾವ ಪುರುಷನು ನಿತ್ಯ ನೈಮಿತ್ತಿಕ ಕರ್ಮಗಳನ್ನು ಫಲಾಪೇಕ್ಷೆ ಇಲ್ಲದೆ, ಈಶ್ವರಾರಾಧನರೂಪವಾಗಿ ಮಾಡುವನೋ ಅವನಿಗೆ ತನ್ನ ಸ್ವರೂಪಜ್ಞಾನವನ್ನುಂಟುಮಾಡಿ, ಸಂಸಾರ ಸಮುದ್ರವನ್ನು ದಾಟಿಸುವುದರಿಂದ ರಕ್ಷಿಸುವುದೆಂದು ಭಾವ.

"ಅಕಾರ ಉಕಾರ ಮಕಾರ ಇತಿ, ತಾನೇಕಧಾ ಸಮಭವತ್ತದೇತದೋಮಿತಿ" ಎಂದು ನಾರಾಯಣೋಪನಿಷತ್ತಿನಲ್ಲಿ ಹೇಳಿರುವಂತೆ, ಅ, ಉ, ಮ ಈ ಮೂರನ್ನು ಕೂಡಿಸಿದರೆ ಓಮ್ ಎಂದಾಗುವುದು. ಇದರಲ್ಲಿ ನಾದ, ಬಿಂದು, ಕಳಾ, ಶಾಂತ, ಅತಿಶಾಂತ ಎಂಬ ಅಂಶಗಳುಂಟು. ಐವತ್ತೆರಡು ವರ್ಣಗಳೂ ಇದರಲ್ಲಿ ಅಡಗಿದೆ. ವಿಷ್ಣುವಿಗೆ ಸಾಲಗ್ರಾಮವು ಹೇಗೆ ವಾಸಸ್ಥಾನವೋ ಹಾಗೆ ಓಂಕಾರವು ಬ್ರಹ್ಮನಿಗೆ ವಾಸಸ್ಥಾನವೆಂದು ಹೇಳುತ್ತಾರೆ. ಪಾತಂಜಲ ಯೋಗ ಸೂತ್ರದಲ್ಲಿ "ತಸ್ಯವಾಚಕಃ ಪ್ರಣವಃ" ಪ್ರಣವವು ಬ್ರಹ್ಮವಾಚಕವು ಎಂದಿದೆ. "ಓಮಿತ್ಯೇತದಕ್ಷರಮಿದಗಾಂ ಸರ್ವಂ ತಸ್ಯೋಪವ್ಯಾಖ್ಯಾನಂ ಭೂತಂ ಭವದ್ಭವಿಷ್ಯದಿತಿ" "ಸರ್ವಮೋಂಕಾರ ಏವ ಸರ್ವಂ ಹ್ಯೇತ ದ್ಬ್ರಹ್ಮ ಅಯಮಾತ್ಮಾ ಬ್ರಹ್ಮ" ಈ ಕಾಣಬರುವ ಪ್ರಪಂಚವೆಲ್ಲವು ನಾಶರಹಿತವಾಗಿರುವ ಓಂ ಕಾರ ರೂಪನಾದ ಪರಮಾತ್ಮನೇ. ಆತನ ವಿವರಣವೇ ಭೂತಭವದ್ಭವಿಷ್ಯತ್ತುಗಳು ಎಂದರೆ ಇದ್ದ, ಇರುತ್ತಿರುವ, ಇರುವ ವಿವೃತ ಪ್ರಪಂಚವು ಹೀಗೆ ಸರ್ವವೂ ಓಂಕಾರಮಯವಾದದ್ದು. ಕಾಲತ್ರಯವನ್ನು ಅತಿಕ್ರಮಿಸಿಯೂ ಯಾವುದಿರುವುದೋ ಅದೂ ಓಂಕಾರವೇ. ಇವೆಲ್ಲವೂ ತಾತ್ವಿಕವಾಗಿ ಪರಮಾತ್ಮನ ಸ್ವರೂಪ. ಆ ಆತ್ಮನು ಪರಮಾರ್ಥದಲ್ಲಿ ಬ್ರಹ್ಮಸ್ವರೂಪನಾಗಿರುವನು ಎಂದು ಮುಂಡಕೋಪನಿಷತ್ತು ವಿವರಿಸುತ್ತದೆ. ಕಾಠಕೋಪನಿಷತ್ತಿನಲ್ಲಿಯೂ ಸಹ ಸಮಸ್ತವೇದಗಳೂ ಯಾವ ಸ್ಥಾನವನ್ನು ಹೇಳುತ್ತದೆಯೋ, ಸಕಲ ತಪಸ್ಸುಗಳೂ ಯಾವುದನ್ನು ಗುರುತಿಸಿರುವುದೋ, ಮತ್ತು ಯಾವುದನ್ನು ಬಯಸತಕ್ಕವರಾಗಿ ಯೋಗಿಗಳು ಬ್ರಹ್ಮಚರ್ಯೆಯನ್ನು ಆಶ್ರಯಿಸುತ್ತಾರೆಯೋ, ಆ[illegible]ನ್ನು ಸಂಗ್ರವಾಗಿ ಹೇಳದೇಕಾದರೆ ಓಂ ಎಂತಲೇ ಹೇಳಿ ಮುಗಿಸಬೇಕು ಎಂದು ಹೇಳುತ್ತದೆ.

ಓಂಕಾರೋಪಾಸನೆಯ ಮಹತ್ವವನ್ನು ತಿಳಿಸುವುದಕ್ಕೆ ಒಂದು ಕಥೆ ಇದೆ. ಹಿಂದೆ ರಾಕ್ಷಸರಿಗೆ ಹೆದರಿದ ದೇವತೆಗಳು ರಕ್ಷಣೆಗಾಗಿ ಓಂಕಾರವನ್ನು ಘ್ರಾಣ, ವಾಕ್ಕು, ಚಕ್ಷಸ್ಸು, ಶ್ರೋತ್ರ, ಮನಸ್ಸು ಇವುಗಳಿಂದ ಉಪಾಸನೆಯನ್ನು ಮಾಡಿದರಂತೆ. ರಾಕ್ಷಸರು ಇವುಗಳೊಂದೊಂದನ್ನೂ ಹೊಡೆದುಹಾಕಿದರು.

ಆಗ ಘ್ರಾಣವು ದುರ್ಗಂಧವನ್ನು ಹಿಡಿಯಿತು. ವಾಕ್ಕು ಸುಳ್ಳನ್ನು ಹೇಳಿತು, ಕಣ್ಣು ನೋಡಬಾರದ್ದನ್ನು ನೋಡಿತು, ಕಿವಿಯು ಕೇಳಬಾರದ್ದನ್ನು ಕೇಳಿತು. ಮನಸ್ಸು ಚಿಂತಿಸಬಾರದ್ದನ್ನು ಚಿಂತಿಸಿತು. ಆಗ ದೇವತೆಗಳು ಓಂಕಾರವನ್ನು ಮುಖ್ಯಪ್ರಾಣನೆಂದು ಉಪಾಸನೆ ಮಾಡಿದರಂತೆ. ರಾಕ್ಷಸರು ಅದನ್ನು ಹೊಡೆಯಲಾಗಲಿಲ್ಲ. ಅವರೇ ಸತ್ತರು. ಆದ್ದ



ರಿಂದ ಮುಖ್ಯಪ್ರಾಣನನ್ನು ಓಂಕಾರವೆಂದು ಉಪಾಸನೆ ಮಾಡಿದವರ ಶತ್ರುಗಳು ಕಲ್ಲುಬಂಡೆಗೆಡಿಕ್ಕಿ ಹೊಡೆದ ಮಣ್ಣು ಹೆಂಟೆಯಂತೆ ನಾಶವಾಗುತ್ತಾರೆ! ಓಂಕಾರವೇ ಆತ್ಮ ಆದ್ದರಿಂದ ಆತ್ಮನ ಚತುಷ್ಪಾದಗಳೇ ಇದರ ಚತುಷ್ಪಾದಗಳು. ವೈಶ್ವಾನರನು ಇದರ ಪ್ರಥಮ ಮಾತ್ರೆಯಾದ ಅಕಾರವು, ತೈಜಸನು ದ್ವಿತೀಯ ಮಾತ್ರೆಯಾದ ಉಕಾರವು, ಪ್ರಾಜ್ಞನು ತೃತೀಯ ಮಾತ್ರೆಯಾದ ಮಕಾರವು ಆತ್ಮನು ಅಮಾತ್ರೆಯಾದ ಓಂಕಾರನೇ. "ಓಂಕಾರ ಪೂರ್ವಿಕಾಸ್ತಿಸ್ರೋ ಮಹಾ ವ್ಯಾಹೃತಯೋನ್ವಯಾಃ ತ್ರಿಪದಾ ಚೈವ ಗಾಯತ್ರೀ ವಿಜ್ಞೇಯಂ ಬ್ರಹ್ಮಣೋಮುಖಂ". ಓಂಕಾರದೊಡನೆ ಕೂಡಿದ ಮೂರು ಮಹಾವ್ಯಾಹೃತಿಗಳೂ, ಗಾಯತ್ರೀಮಂತ್ರವೂ ಸೇರಿ ಬ್ರಹ್ಮ ಮುಖವೆನ್ನಿಸಿಕೊಳ್ಳುವುದೆಂದು ಮನುವಚನವಿರುವುದು. "ಓಮಿತ್ಯೇಕಾಕ್ಷರಂ ಬ್ರಹ್ಮ" --ಏಕಾಕ್ಷರವಾಗಿರುವ ಓಂ ಎಂಬುವದು ಬ್ರಹ್ಮಸ್ವರೂಪ ಎಂದು "ಗಿರಾಮಸ್ಮೇಕಮಕ್ಷರಂ" ಪರಮಾತ್ಮನಾದ ನಾನು ಶಬ್ದದಳೊಳಗೆ ಏಕಾಕ್ಷರವಾದ ಓಂಕಾರಸ್ವರೂಪನಾಗಿರುವೆನು ಎಂದೂ--

"ಪ್ರಣವಾದ್ಯಾಸ್ಸಿ ತಾವೇದಾ
ಪ್ರಣವೇಪರ್ಯವಸ್ಥಿತಾಃ
ವಾಙ್ಞಯಂ ಪ್ರಣವಸ್ಸರ್ವಂ
ತಸ್ಮಾತ್ಪ್ರಣವಮಭ್ಯಸೇತ್

ಸಕಲ ವೇದಗಳೂ ಪ್ರಣವವನ್ನೆ ಆದಿಯಲ್ಲಿ ಉಳ್ಳವುಗಳು, ಪ್ರಣವದಲ್ಲಿಯೇ ನೆಲೆಗಂಡಿವೆ, ಶಬ್ದ ಪ್ರಪಂಚವೆಲ್ಲವೂ ಪ್ರಣವವೇ - ಆದುದರಿಂದ ಅನವರತವೂ ಪ್ರಣವವನ್ನು ಅಭ್ಯಸಿಸಬೇಕು, ಉಪಾಸನೆಯನ್ನು ಮಾಡಬೇಕು ಎಂಬುದಾಗಿಯೂ ಅನೇಕ ಸ್ಮೃತಿಗಳು ಮೊರೆ ಇಡುತ್ತದೆ.

ವೈದಿಕ ಕಾರ್ಯಗಳಿಗೆಲ್ಲಾ ಪ್ರಣವವೇ ಮುಂದಾಗಿರುವುದು, ಪ್ರಣವವನ್ನು ಉಪಾಸನೆ ಮಾಡುವವನಿಗೆ ವೇದವೆಲ್ಲವೂ ಸ್ವಾಧೀನವಾಗಿ ಪರಬ್ರಹ್ಮಪ್ರಾಪ್ತಿಯುಂಟಾಗುವುದು. ಸತ್ಯಸ್ವರೂಪವಾದ ಬ್ರಹ್ಮವನ್ನು ಬಯಸುವವರು ಪ್ರಪಂಚರೂಪದಿಂದ ವ್ಯಕ್ತವಾಗಿಯೂ, ಅತೀಂದ್ರಿಯವೆನಿಸಿ ಅವ್ಯಕ್ತವಾಗಿಯೂ ಇರುವ ಪರಬ್ರಹ್ಮವೇ ಓಂಕಾರವು ಎಂದು, ನಿಖಿಲ ಪ್ರಪಂಚಕ್ಕೂ ಇರುವ ಪ್ರಣವರೂಪವಾದ ಓಂಕಾರವೇ ಆದಿಮಧ್ಯಾಂತರಂಗಳಾಗಿದೆ. ಸಮಸ್ತ ಪ್ರಾಣಿಗಳ ಹೃದಯ ಗುಹೆಯಲ್ಲಿರುವ ಪರಮೇಶ್ವರನನ್ನೇ ಓಂಕಾರವನ್ನಾಗಿ ತಿಳಿಯಬೇಕು ಎಂದೂ, ಮಾತ್ರಾದಿ ಗುಣರಹಿತನಾಗಿಯೂ ಇರುತ್ತಾ ಉಪಾಸಕನ ಅಖಂಡಾತ್ಮ ಸಂಭವನಾತೀತನಾಗಿರುವ ಆ ಪರಮೇಶ್ವರನೇ ಓಂಕಾರ ಸ್ವರೂಪನಾಗಿರುವನು, ಅಂಥ ಓಂಕಾರವನ್ನು ಅರಿತವನು ಮಹಾಯೋಗಿಯೆನಿಸುವನು ಎಂಬುದಾಗಿ ಅನೇಕ ಶ್ರುತಿಗಳು ವಿಶದಪಡಿಸುತ್ತದೆ.

ವೇದಾರಂಭದಲ್ಲಿಯೂ ಮತ್ತು ಕೊನೆಯಲ್ಲಿಯೂ ಸಹ ಓಂಕಾರವನ್ನು ಪಠಿಸಬೇಕು. ಅಧ್ಯಯನದ ಆರಂಭದಲ್ಲಿ ಓಂಕಾರವನ್ನು ಪಠಿಸದಿದ್ದರೆ ಹೇಳಿಕೊಂಡ ವೇದವೂ ಸ್ರವಿಸುತ್ತದೆ. ಅಂತ್ಯದಲ್ಲಿ ಪಠಿಸದಿದ್ದರೆ ಛಿದ್ರವಾಗಿ ಹೋಗುತ್ತದೆಂದು ಮನುವು ಹೇಳಿರುವುದರಿಂದ ಅಧ್ಯಯನದ ಆದ್ಯಂತಗಳಲ್ಲಿ ಪ್ರಣವನ್ನು ಪಠಿಸಬೇಕು.

ಓಂಕಾರಶ್ಚಾಥ ಶಬ್ದಶ್ಚ
ದ್ವಾವೇತೌ ಬ್ರಹ್ಮಣಃ ಪುರಾ
ಕಂಠಂ ಭಿತ್ವಾ ವಿನಿರ್ಯಾತಾಂ
ತಸ್ಮಾನ್ಮಾಂಗಳಿಕಾವುಭೌ

ಸೃಷ್ಟ್ಯಾದಿಯಲ್ಲಿ ಓಂಕಾರವೂ, ಅಥ ಶಬ್ದವೂ - ಈ ಎರಡೂ ಚತುರ್ಮುಖನ ಕಂಠವನ್ನು ಭೇದಿಸಿಕೊಂಡು ಹೊರಹೊರಟವು, ಆದುದರಿಂದ ಇವರಡೂ ಸಕಲ ಮಂಗಳ ಪ್ರದಗಳಾಗಿವೆ ಎಂದೀ ಪ್ರಕಾರವಾಗಿ ಓಂಕಾರದ ಮಹಿಮೆಯನ್ನು ಸಕಲ ವೇದಶಾಸ್ತ್ರಗಳು ಕೊಂಡಾಡುತಲಿವೆ.

# ಧರ್ಮಶಾಸ್ತ್ರಗಳು

---ವಿದ್ವಾನ್ 'ರಘುಸುತ'.

ಭಗವಾನ್ ವೇದವ್ಯಾಸರು ತಮ್ಮ 'ವ್ಯಾಸ ಸ್ಮೃತಿ'ಯಲ್ಲಿ ಧರ್ಮದ ಅವಶ್ಯಕತೆ ಹಾಗೂ ಅರ್ಥವನ್ನು ತಿಳಿಸುತ್ತಾ ಹೀಗೆಂದು ಹೇಳಿದ್ದಾರೆ-

ಅಶಾಶ್ವತಾನಿ ಗಾತ್ರಾಣಿ
ವಿಭವೋ ನೈವ ಶಾಶ್ವತಃ
ನಿತ್ಯಂ ಸನ್ನಿಹಿತೋ ಮೃತ್ಯುಃ
ಕರ್ತವ್ಯೋ ಧರ್ಮ ಸಂಗ್ರಹಃ

ಶರೀರವು ಶಾಶ್ವತವಲ್ಲ. ಧನ ಇತ್ಯಾದಿ ಐಶ್ವರ್ಯಗಳು ಸರ್ವದಾ ಒಂದೇ ರೀತಿಯಲ್ಲಿ ಒಂದು ಕಡೆ ಇರುವಂತಹವುಗಳಲ್ಲ. ಮೃತ್ಯುವಂತೂ ದಿನದಿನಕ್ಕೆ ಹತ್ತಿರ ಬರತೊಡಗಿದೆ. ಇಂತಹ ಸ್ಥಿತಿಯಲ್ಲಿ ಪ್ರಪಂಚದ ಅನಿತ್ಯತೆಯನ್ನು ತಿಳಿದು 'ಧರ್ಮ'ವನ್ನು ಪ್ರತಿದಿನ ಸಂಗ್ರಹ ಮಾಡಿಕೊಳ್ಳುತ್ತಾ ಹೋಗಬೇಕು.

ಮಹರ್ಷಿ ಮನುವೂ ಕೂಡ ಹೀಗೆಂದು ಹೇಳುತ್ತಾರೆ-

ನಾಮುತ್ರ ಹಿ ಸಹಾಯಾರ್ಥಂ
ಪಿತಾ ಮಾತಾ ಚ ತಿಷ್ಠತಃ
ನ ಪುತ್ರದಾರಾ ನ ಜ್ಞಾತಿ
ಧರ್ಮಸ್ತಿಷ್ಠತಿ ಕೇವಲಃ

ಜೀವವು ಪರಲೋಕವನ್ನು ಕುರಿತು ಪಯಣಿಸುವಾಗ ತಂದೆ, ತಾಯಿ, ಮಗ, ಹೆಂಡತಿ ಹಾಗೂ ತಮ್ಮ ಜಾತಿಯ ಜನ-ಇವರಲ್ಲಿ ಯಾರೂ ಸಹಾಯಕ್ಕಾಗಿ ನಿಲ್ಲಲಾರರು. ಅಂತಹ ಸಮಯದಲ್ಲಿ ಕೇವಲ 'ಧರ್ಮ'ವು ಮಾತ್ರವೇ ಸಹಾಯಕ್ಕೆ ನಿಲ್ಲುವುದು.

ಸೃಷ್ಟಿಯ ಕ್ರಮದಲ್ಲಿ 'ಮಾನವ ಶರೀರ'ವು ಪೂರ್ಣತೆಯ ದ್ಯೋತಕವಾಗಿದೆ. ಮನುಸ್ಮೃತಿಯ ಅನುಸಾರ ಪರಮಾತ್ಮನು ತನ್ನ ಶರೀರದ ಬೇರೆ ಬೇರೆ ಭಾಗಗಳಿಂದ ಬೇರೆ ಬೇರೆ, ವರ್ಣಗಳವರನ್ನು ಸೃಷ್ಟಿ ಮಾಡಿದನು-

ಸೃಷ್ಟಿಯಲ್ಲಿನ ಸಮಸ್ತ ಪ್ರಕ್ರಿಯೆಗೆ ಚಾಲನೆಯನ್ನು ಕೊಡುವುದಕ್ಕಾಗಿ ಸ್ತ್ರೀ - ಪುರುಷರನ್ನು ರಚಿಸಿದನು. ಮುಂದೆ ಮನು ಇತ್ಯಾದಿ ಪ್ರಜಾಪತಿಗಳ ಮುಖಾಂತರ ಸಂತಾನ ಪರಂಪರೆಯಲ್ಲಿ ವೃದ್ಧಿಯನ್ನು ಮಾಡಿದನು.

ಈ ಎಲ್ಲರ ಜೀವನಗಳ ನಿಯಮನ ಮಾಡುವುದಕ್ಕಾಗಿ ಧರ್ಮಶಾಸ್ತ್ರದ ಪರಂಪರೆಯನ್ನು ಪ್ರಾರಂಭ ಮಾಡಿದನು. ಅದರಲ್ಲಿ ಪ್ರವೃತ್ತಿ ಮಾರ್ಗ ಹಾಗೂ ನಿವೃತ್ತಿ ಮಾರ್ಗ - ಎಂಬ ಎರಡು ವಿಧಾನಗಳನ್ನು ಪ್ರಾರಂಭಿಸಿ, ಆಶ್ರಯ ನೀಡಲಾಯಿತು.

ಆದುದರಿಂದ ಧರ್ಮಶಾಸ್ತ್ರದ ಮುಖ್ಯಗುರಿಯು ಮಾನವನ ಶರೀರವೇ ಆಗಿರುತ್ತದೆ. ಆದಿ ಶಂಕರರು ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಹೇಳಿರುವಂತೆ, 'ಮನುಷ್ಯಾಧಿಕಾರಿತ್ವಾಚ್ಛಾಸ್ತ್ರಸ್ಯ ಶಾಸ್ತ್ರಮಧಿಕರೋತಿ ಹಿ ಮನುಷ್ಯಃ' - ವಿಧಿನಿಷೇಧಾತ್ಮಕ ವಾಕ್ಯವು ಮಾನವನಿಗಷ್ಟೇ ಸೀಮಿತವಾದುದಾಗಿರುತ್ತದೆ.

ಶಾಸ್ತ್ರದ 'ಅಹರಹಃ ಸಂಧ್ಯಾಮುಪಾಸೀತ' ಹಾಗೂ 'ನ ಕಲಂಜಂ ಭಕ್ಷಯೇತ್' - ಎನ್ನುವ ವಿಧಿ - ನಿಷೇಧ - ರೂಪದ ಮಾತುಗಳು ಕೇವಲ ಮಾನವನಿಗಷ್ಟೇ ಸೀಮಿತವಾದವುಗಳು. ಇವು ಪಶು - ಪಕ್ಷಿಗಳಿಗಾಗಿ ಅಲ್ಲ. ಆದುದರಿಂದ ನೀತಿಯ ಈ ಉಪದೇಶವನ್ನು ನಾವು ಸದಾ ನೆನಪಿನಲ್ಲಿಟ್ಟುಕೊಳ್ಳಬೇಕು.

'ಆಹಾರ ನಿದ್ರಾಭಯ ಮೈಥುನಂ ಚ
ಸಾಮಾನ್ಯಮೇತತ್ ಪಶುಭಿರ್ನರಾಣಾಮ್
ಧರ್ಮೋಹಿ ತೇಷಾಮಧಿಕೋ ವಿಶೇಷೋ
ಧರ್ಮೇಣ ಹೀನಾಃ ಪಶುಭಿಃ ಸಮಾನಾಃ'

ಎನ್ನುವಂತೆ ಆಹಾರ, ನಿದ್ರೆ, ಭಯ ಹಾಗೂ ಮೈಥುನ - ಇವನ್ನು ಸಾಮಾನ್ಯವಾಗಿ ಮಾನವ ಹಾಗೂ ಪಶುಗಳಲ್ಲಿ ಸಾಮಾನ್ಯ ರೂಪದಲ್ಲಿ ಕಾಣಬಹುದಾಗಿದೆ. ಕೇವಲ ಧರ್ಮವು ಮಾತ್ರ ಇವೆರಡನ್ನೂ ಬೇರೆ ಮಾಡುವ ತತ್ತ್ವವಾಗಿದೆ. ಧರ್ಮವಿಲ್ಲದ ಮಾನವನು ಪಶುವಿಗೆ ಸಮಾನನಾಗುತ್ತಾನೆ.

## ಧರ್ಮವೆಂದರೇನು

ವೇದಾನುಶಾಸನವನ್ನು ಪಾಲಿಸುವುದೇ 'ಧರ್ಮ'ವಾಗಿರುತ್ತದೆ. ಮನುವು ಇದನ್ನು ಇನ್ನಷ್ಟು ಸ್ಪಷ್ಟಪಡಿಸುತ್ತಾ ಹೀಗೆಂದು ತಿಳಿಸಿದ್ದಾನೆ--

ವೇದಃ ಸ್ಮೃತಿಃ ಸದಾಚಾರಃ
ಸ್ವಸ್ಯ ಚ ಪ್ರಿಯಮಾತ್ಮನಃ
ಏತಚ್ಚತುರ್ವಿಧಂ ಪ್ರಾಹುಃ
ಸಾಕ್ಷಾದ್ಧರ್ಮಸ್ಯ ಲಕ್ಷಣಮ್

(ಮನು ೨/೧೨)

ಅಂದರೆ ವೇದ, ಧರ್ಮಶಾಸ್ತ್ರ, ಸಜ್ಜನರ ಆಚಾರ ಹಾಗೂ ಆತ್ಮಸಂತುಷ್ಟಿ, ಇವು ನಾಲ್ಕೂ ನಿಜ ಅರ್ಥದಲ್ಲಿ ಧರ್ಮದ ಲಕ್ಷಣಗಳಾಗಿವೆ.

ಶ್ರುತಿಯೂ ಕೂಡ,

ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ
x x x x x x x x x x x x x x x x x x x
ಧರ್ಮಿಷ್ಠಂ ವೈ ಪ್ರಜಾ ಉಪಸರ್ಪಂತಿ ಲೋಕೇ

-ಎಂದು ಹೇಳಿದೆ.

ಒಟ್ಟಿನಲ್ಲಿ ಹೇಳುವುದಾದರೆ ಈ ಸಂಪೂರ್ಣ ಜಗತ್ತಿನ ಗೌರವ, ಪ್ರತಿಷ್ಠೆಗಳು ಧರ್ಮದ ಮೇಲೆ ಆಧಾರಪಟ್ಟಿವೆ. ಪ್ರಜೆಗಳು ಯಾವಾಗಲೂ ಧರ್ಮಿಷ್ಠನಾದ ರಾಜನನ್ನೇ ತಮ್ಮ ರಾಜನಾಗಿರಲು ಬಯಸುತ್ತಾರೆ. ಆದುದರಿಂದ ಧರ್ಮವು ಶಾಶ್ವತವಾದುದು, ನಿಯಾಮಕವಾದುದಾಗಿರುತ್ತದೆ.

ಇದೇ ಮಾತನ್ನು ವಾಸಿಷ್ಠ ಸ್ಮೃತಿಯು

ಜ್ಞಾತ್ವಾ ಚಾಗುತಿಷ್ಠನ್ ಧಾರ್ಮಿಕಃ
ಪ್ರಶಸ್ಯತಮೋ ಭವತಿ

ಎಂದು ಸ್ಪಷ್ಟಪಡಿಸಿದೆ.

ಅಂದರೆ ಯಾವ ಮಾನವನು ಧರ್ಮ ತತ್ತ್ವವನ್ನು ತಿಳಿದು ಅದರ ಸೇವೆಯನ್ನು ಮಾಡುವನೊ, ಅಂತಹವನನ್ನು ಈ ಇಹಲೋಕದಲ್ಲಿ 'ಧಾರ್ಮಿಕ ವ್ಯಕ್ತಿ' ಎಂದು ಕರೆಯುತ್ತಾರೆ.

ಈ ಧರ್ಮದ ಸ್ವರೂಪವು ವಿಲಕ್ಷಣವಾದುದು. ಇದರ ಪ್ರಚಾರ - ಪ್ರಸಾರ ಮಾಡುವುದಕ್ಕಾಗಿ, ವರ್ಣಾಶ್ರಮಗಳ ಅನುಕೂಲ ಸಂಚಾಲನಕ್ಕಾಗಿ 'ಶ್ರೌತ ಧರ್ಮ'ದ ಪ್ರತಿಷ್ಠೆ ಮಾಡಲಾಗಿದೆ. ಆ ಶ್ರೌತಧರ್ಮದ ಸಮ್ಯಕ್ ಪೋಷಣಾರ್ಥವಾಗಿ ಶ್ರುತಿ ವಿಹಿತವಾದ ಅನೇಕ ಶ್ರೌತಸೂತ್ರ, ಗೃಹ್ಯಸೂತ್ರ ಹಾಗೂ ಶ್ರುತಿಗಳನ್ನು ಮಹರ್ಷಿಗಳು ರಚಿಸಿರು

ವರು. ಮಾನವ ಗೃಹ್ಯ ಸೂತ್ರ, ಮನುಸ್ಮೃತಿ, ಕಾತ್ಯಾಯನ - ಗೃಹ್ಯ ಸೂತ್ರ, ಕಾತ್ಯಾಯನ ಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಆಶ್ವಲಾಯನ ಶ್ರೌತಸೂತ್ರ, ಆಪಸ್ತಂಬ - ಗೃಹ್ಯಸೂತ್ರ ಹಾಗೂ ಆಪಸ್ತಂಬ ಸ್ಮೃತಿಗಳು ಇತ್ಯಾದಿಗಳು ಇವುಗಳಲ್ಲಿ ಮುಖ್ಯವಾದುವು.

ಕಾಲಾನುಕ್ರಮದಲ್ಲಿ ಈ ಪರಿಧಿಯಲ್ಲಿ ಧರ್ಮಶಾಸ್ತ್ರಗಳನ್ನು ರಚಿಸಿದ, ಈ ಪರಿಧಿಯಿಂದ ಬೇರೆಯಾದ ಅನೇಕ ಆಚಾರ್ಯರು ರೂಪುಗೊಂಡರು. ಈ ಕಾರಣದಿಂದ ಅವರ ಸ್ಮೃತಿಗಳಲ್ಲಿ ವೈವಿಧ್ಯಗಳು ಕಾಣಿಸಿಕೊಂಡವು.

ಆಚಾರ್ಯ - ಋಷಿಗಣಗಳು ಶ್ರುತಿಗಳ ಮಂಥನ ಮಾಡಿ ಧರ್ಮಶಾಸ್ತ್ರಗಳ ತತ್ವಗಳನ್ನು ಸಂಕಲಿಸಿದರು. ಆ ತತ್ವಗಳನ್ನು ಅವರು ತಮ್ಮ ಜೀವನದಲ್ಲಿ ಸ್ವತಃ ಅಳವಡಿಸಿಕೊಂಡರು. ಹೀಗೆ ತಮ್ಮ ಸದಾಚಾರದಲ್ಲಿ ಅನ್ವಯಿಸಿಕೊಂಡಿದ್ದರಿಂದಲೇ ಅವರುಗಳು 'ಆಚಾರ್ಯ'ರಾದರು.

ಆಚಿನೋತಿ ಹಿ ಶಾಸ್ತ್ರಾರ್ಥ
ಮಾಚಾರೇ ಸ್ಥಾಪಯತ್ಯಪಿ
ಸ್ವಯಮಾಚರತೇ ಯಶ್ಚ
ಆಚಾರ್ಯಃ ಸ ನಿಗದ್ಯತೆ

ಈ ಗುಣಗಳಿಂದ ಸಂಪನ್ನನಾಗಿರುವ ಆಚಾರ್ಯನೇ ಮಾರ್ಗನಿರ್ದೇಶನ ಮಾಡಲು ಯೋಗ್ಯನಾಗಿರುತ್ತಾನೆ.

ಧರ್ಮಶಾಸ್ತ್ರದ ವಿಭಿನ್ನ ಅಂಗಗಳನ್ನು ವೃದ್ಧಿಪಡಿಸಿರುವ ಆಚಾರ್ಯನು, ಯಾಜ್ಞವಲ್ಕ್ಯ ಸ್ಮೃತಿಯಲ್ಲಿನ ಈ ಕೆಳಗೆ ತಿಳಿಸಿರುವ ಎರಡು ಶ್ಲೋಕಗಳಿಗೆ ಅನುಗುಣವಾಗಿ ಆಯಾ ವಿಷಯಗಳಲ್ಲಿ ಉಪನಿಬದ್ಧರಾಗಿರುತ್ತಾನೆ.

ಮನ್ವತ್ರಿವಿಷ್ಣು ಹಾರೀತ
ಯಾಜ್ಞವಲ್ಕ್ಯೋ ಶನೋಂಗಿರಾಃ
ಯಮಾಪಸ್ತಂಬ ಸಂವರ್ತಾಃ
ಕಾತ್ಯಾಯನ ಬೃಹಸ್ಪತೀ
ಪರಾಶರಾಖ್ಯಾ ಸ ಶಂಖಲಿಖಿತಾ ದಕ್ಷಗೌತಮೇ
ಶಾತಾತಪೋ ವಸಿಷ್ಠಶ್ಚ
ಧರ್ಮಶಾಸ್ತ್ರ ಪ್ರಯೋಜಕಾಃ

ಮನು, ಅತ್ರಿ, ವಿಷ್ಣು, ಹಾರೀತ, ಯಾಜ್ಞವಲ್ಕ್ಯ ಉಶನಾ, ಅಂಗಿರಾ, ಯಮ, ಆಪಸ್ತಂಬ, ಸಂವರ್ತ, ಕಾತ್ಯಾಯನ, ಬೃಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೌತಮ, ಶಾತಾತಪ ಹಾಗೂ ವಸಿಷ್ಠ ಈ ಆಚಾರ್ಯರುಗಳು ಧರ್ಮದ ಪ್ರಾಯೋಜಕರಾಗಿರುತ್ತಾರೆ.

ಪರಾಶರಸ್ಮೃತಿಯಲ್ಲಿ ಕಶ್ಯಪ, ಗರ್ಗ ಹಾಗೂ ಪ್ರಚೇತನ ಈ ಮೂರು ಹೆಸರುಗಳು ಹೆಚ್ಚಾಗಿ ಕಂಡುಬರುತ್ತವೆ. ಇವರಿಷ್ಟೆ ಧರ್ಮಶಾಸ್ತ್ರದ ಆಚಾರ್ಯರುಗಳಲ್ಲ. ಇವರೊಂದಿಗೆ ಇನ್ನೂ ಅನೇಕ ಆಚಾರ್ಯರುಗಳು ಇದ್ದಾರೆ. ಅವರುಗಳ ಹೆಸರಿನಲ್ಲೇ ಸ್ಮೃತಿಗಳು ಪ್ರಸಿದ್ಧಿಯನ್ನು ಪಡೆದಿವೆ. ಅವು ಯಾವುವೆಂದರೆ-

೧) ಮನುಸ್ಮೃತಿ, ೨) ವೃದ್ಧಮನುಸ್ಮೃತಿ, ೩) ಯಾಜ್ಞವಲ್ಕ್ಯಸ್ಮೃತಿ, ೪) ವೃದ್ಧಯಾಜ್ಞವಲ್ಕ್ಯಸ್ಮೃತಿ, ೫) ವಿಷ್ಣುಸ್ಮೃತಿ, ೬) ಬೃಹದ್ ವಿಷ್ಣುಸ್ಮೃತಿ, ೭) ಅತ್ರಿಸ್ಮೃತಿ, ೮) ಹಾರೀತ ಸ್ಮೃತಿ, ೯) ಲಘುಹಾರೀತ ಸ್ಮೃತಿ, ೧೦) ಔಶನಸ ಸ್ಮೃತಿ ೧೧) ಅ - ಔಶನಸಸ್ಮೃತಿ, ಕ - ಔಶನಸಸ್ಮೃತಿ, ೧೨) ಆಂಗೀರಸ ಸ್ಮೃತಿ, ೧೩) ಯಮ ಸ್ಮೃತಿ, ೧೪) ಬೃಹತ್ ಯಮಸ್ಮೃತಿ, ೧೫) ಆಪಸ್ತಂಬ ಸ್ಮೃತಿ, ೧೬) ಸಂವರ್ತಸ್ಮೃತಿ, ೧೭) ಕಾತ್ಯಾಯನ ಸ್ಮೃತಿ, ೧೮) ಬೃಹಸ್ಪತಿ ಸ್ಮೃತಿ, ೧೯) ಪರಾಶರ ಸ್ಮೃತಿ, ೨೦) ಬೃಹತ್ ಪಾರಾಶರೀಯ ಧರ್ಮಶಾಸ್ತ್ರ, ೨೧) ವ್ಯಾಸ ಸ್ಮೃತಿ, ೨೨) ಶಂಖ ಸ್ಮೃತಿ, ೨೩) ಲಘು ಶಂಖ ಸ್ಮೃತಿ, ೨೪) ಲಿಖಿತ ಸ್ಮೃತಿ, ೨೫) ಶಂಖ - ಲಿಖಿತಸ್ಮೃತಿ, ೨೬) ದಕ್ಷಸ್ಮೃತಿ, ೨೭) ಗೌತಮಸ್ಮೃತಿ, ೨೮) ಶಾತಾತಪಸ್ಮೃತಿ, ೨೯) ಎರಡನೇ ಶಾತಾತಪ ಸ್ಮೃತಿ, ೩೦) ವೃದ್ಧ ಶಾತಾತಪ ಸ್ಮೃತಿ, ೩೧) ವಾಸಿಷ್ಠ ಸ್ಮೃತಿ, ೩೨) ವೃದ್ಧ ವಾಸಿಷ್ಠ ಸ್ಮೃತಿ, ೩೩) ಪ್ರಜಾಪತಿ ಸ್ಮೃತಿ, ೩೪) ದೇವಲಸ್ಮೃತಿ, ೩೫) ಎರಡನೇ ದೇವಲಸ್ಮೃತಿ, ೩೬) ಗೋಭಿಲಸ್ಮೃತಿ, ೩೭) ಲಘು ಆಶ್ವಲಾಯನಸ್ಮೃತಿ, ೩೮) ನಾರದ ಸ್ಮೃತಿ, ೩೯) ಸುಮಂತ ಸ್ಮೃತಿ, ೪೦) ಮಾರ್ಕಂಡೇಯಸ್ಮೃತಿ, ೪೧) ಪ್ರಾಚೇತಸ ಸ್ಮೃತಿ, ೪೨) ಪಿತಾಮಹಸ್ಮೃತಿ, ೪೩) ಮರೀಚಿಸ್ಮೃತಿ, ೪೪) ಜಾಬಾಲಸ್ಮೃತಿ, ೪೫) ಪೈಠೀನಸ ಸ್ಮೃತಿ, ೪೬) ಶೌನಕ ಸ್ಮೃತಿ, ೪೭) ಕಣ್ವಸ್ಮೃತಿ, ೪೮) ಷಟ್‌ತ್ರಿಂ ಶನ್ಮುನಿಸ್ಮೃತಿ, ೪೯) ಚತುರ್ವಿಂಶತಿ ಮುನಿಸ್ಮೃತಿ, ೫೦) ಉಪಮನ್ಯುಸ್ಮೃತಿ, ೫೧) ಕಶ್ಯಪಸ್ಮೃತಿ, ೫೨) ಲೌಗಾಕ್ಷಿಸ್ಮೃತಿ, ೫೩) ಕ್ರತುಸ್ಮೃತಿ, ೫೪) ಪುಲಸ್ತ್ಯಸ್ಮೃತಿ, ೫೫) ಶಾಂಡಿಲ್ಯಸ್ಮೃತಿ, ೫೬) ಮಾನವ ಗೃಹ್ಯಸೂತ್ರ.

ಮೇಲೆ ತಿಳಿಸಿರುವ ಎಲ್ಲ ಸ್ಮೃತಿಗಳೂ ಒಂದು ಗೊತ್ತಾದ ಚೌಕಟ್ಟಿನ ಆಧಾರದ ಮೇಲೆ ರಚಿತವಾಗಿವೆ.

ಆ ಚೌಕಟ್ಟು ಈ ಕೆಳ ಕಾಣಿಸಿರುವ ರೀತಿಯಲ್ಲಿದೆ -೧) ಧರ್ಮ ಪ್ರಕರಣ, ೨) ಸೃಷ್ಟಿ ಪ್ರಕರಣ, ೩) ದೇಶ ಪ್ರಕರಣ, ೪) ಬ್ರಾಹ್ಮಣ ಪ್ರಕರಣ, ೫) ಕ್ಷತ್ರಿಯ ಪ್ರಕರಣ, ೬) ರಾಜ ಪ್ರಕರಣ, ೭) ವ್ಯವಹಾರ ಹಾಗೂ ರಾಜದಂಡ ಪ್ರಕರಣ, ೮) ವೈಶ್ಯ ಪ್ರಕರಣ, ೯) ಶೂದ್ರ ಪ್ರಕರಣ, ೧೦) ಬ್ರಹ್ಮಚಾರಿ ಪ್ರಕರಣ, ೧೧) ಗೃಹಸ್ಥ ಪ್ರಕರಣ, ೧೨) ವಿವಾಹ ಪ್ರಕರಣ, ೧೩) ಸ್ತ್ರೀ - ಪ್ರಕರಣ, ೧೪) ಪುತ್ರ ಪ್ರಕರಣ, ೧೫) ಜಾತಿ ಪ್ರಕರಣ, ೧೬) ಧನವಿಭಾಗ ಪ್ರಕರಣ, ೧೭) ದಾನ ಪ್ರಕರಣ, ೧೮) ಶ್ರಾದ್ಧ ಪ್ರಕರಣ, ೧೯) ಅಶೌಚ ಪ್ರಕರಣ, ೨೦) ಶುದ್ಧಾಶುದ್ಧ ಪ್ರಕರಣ, ೨೧) ಪ್ರಾಯಶ್ಚಿತ್ತ ಪ್ರಕರಣ, ೨೨) ವ್ರತ ಪ್ರಕರಣ, ೨೩) ಪಾಪಫಲ ಪ್ರಕರಣ, ೨೪) ವಾನಪ್ರಸ್ಥ ಪ್ರಕರಣ, ೨೫) ಸಂನ್ಯಾಸಿ ಪ್ರಕರಣ, ೨೬) ಅಧ್ಯಾತ್ಮಜ್ಞಾನ ಪ್ರಕರಣ.

ಈ ಪ್ರಕರಣಗಳಲ್ಲಿ ಆಚಾರ, ವ್ಯವಹಾರ, ಧರ್ಮನೀತಿ, ರಾಜನೀತಿ, ರಾಜಧರ್ಮ, ಆಜ್ಞೆ ನೀಡುವಿಕೆ, ಧರ್ಮಾನುಸಾರ ದಿನಚರ್ಯೆ, ಸ್ತ್ರೀ ಪುರುಷರ ಸಾಮಾನ್ಯ ಧರ್ಮ ಹಾಗೂ ವಿಶೇಷ ಧರ್ಮ, ಗರ್ಭಾದಾನ ಇತ್ಯಾದಿ ಸಂಸ್ಕಾರಗಳು, ಪುತ್ರಪುತ್ರಿಯರ ಧರ್ಮ, ಎಲ್ಲ ಪಾಪಗಳ ಪ್ರಾಯಶ್ಚಿತ್ತ, ಕರ್ಮವಿಪಾಕ, ವರ್ಣಧರ್ಮ, ಆಶ್ರಮಧರ್ಮ ಇತ್ಯಾದಿ ಅನೇಕ ಲೋಕಮಂಗಳಕಾರೀ ವಿಷಯಗಳು ಕಂಡುಬರುತ್ತವೆ.

ಈ ರೀತಿಯಲ್ಲಿ ಧರ್ಮಶಾಸ್ತ್ರಗಳಲ್ಲಿ ಜನ ಜೀವನದ ವ್ಯಾವಹಾರಿಕ ವಿವರಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಸಾಮಾಜಿಕದರ್ಶನವೂ ಅವುಗಳಿಂದ ಪ್ರಭಾವಿತಗೊಳ್ಳುತ್ತವೆ. ಆದುದರಿಂದ ನಮ್ಮ ನಾಡಿನ ಪತನೋನ್ಮುಖ ಸಾಂಸ್ಕೃತಿಕ ಸ್ತರಗಳನ್ನು ಹೊಂದಿರುವ ಇಂತಹ ಪ್ರತಿಗಾಮಿ ವಾತಾವರಣದಲ್ಲಿ ಧರ್ಮಶಾಸ್ತ್ರಗಳ ಆವಶ್ಯಕತೆ ಹಾಗೂ ಅವುಗಳ ಪಾಲನೆಯ ಅನಿವಾರ್ಯತೆಯು ಇದ್ದೇ ಇದೆ.

(ಸಂಗ್ರಹ)



# ದಾನದ ವೈಶಿಷ್ಟ್ಯ

ಸಾಲೀಮಠ ದೊಡ್ಡಯ್ಯಶಾಸ್ತ್ರಿ.

ಕೊಡುವುದು ಎಂಬರ್ಥದಲ್ಲಿ 'ದಾನ' ಎಂಬ ಪದವನ್ನು ಬಳಸಲಾಗುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ದಾನಕ್ಕೆ ಅತ್ಯಂತ ವಿಶಿಷ್ಟಸ್ಥಾನವಿದೆ. ಸಮಾಜದಲ್ಲಿ ದಾನಿಯು ಗೌರವಿಸಲ್ಪಡುತ್ತಾನೆ. ದಾನಗಳಲ್ಲಿ ಎರಡು ವಿಧಗಳಿವೆ. ಮೊದಲನೆಯದಾಗಿ ಭೌತಿಕದಾನ, ಇನ್ನೊಂದು ಅಭೌತಿಕದಾನ. ಭೌತಿಕದಾನದಲ್ಲಿ ಭೂದಾನ, ಗೋದಾನ, ಕನ್ಯಾದಾನ, ಸುವರ್ಣದಾನ ಇತ್ಯಾದಿಗಳು ಸೇರಿಕೊಂಡರೆ, ಅಭೌತಿಕ ದಾನದಲ್ಲಿ ವಿದ್ಯೆ ಸೇರುತ್ತದೆ. "ಅನ್ನದಾನಂ ಪರಂ ದಾನಂ ವಿದ್ಯಾದಾನಮತಃಪರಂ" ಎನ್ನುವಂತೆ ಅನ್ನದಾನಕ್ಕಿಂತಲೂ ವಿದ್ಯಾದಾನ ಶ್ರೇಷ್ಠವಾದದ್ದು. ಅನ್ನದಾನದಿಂದ ತಾತ್ಕಾಲಿಕ ತೃಪ್ತಿ ಉಂಟಾದರೆ, ವಿದ್ಯಾದಾನವು ವ್ಯಕ್ತಿಯನ್ನು ಜೀವನ ಪರ್ಯಂತವೂ ಕಾಪಾಡಬಲ್ಲದು.

ದಾನದ ವೈಶಿಷ್ಟ್ಯ ಸೂಚಿಸುವ ಸುಭಾಷಿತವೊಂದು ಹೀಗಿದೆ.

ಗೌರವಂ ಲಭ್ಯತೇ ದಾನಾತ್
ನತು ವಿತ್ತಸ್ಯ ಸಂಚಯಾತ್
ಸ್ಥಿತಿರುಚ್ಚೈಃ ಪಯೋದಾನಂ
ಪಯೋಧಿನಾಮಧಃ ಸ್ಥಿತಿಃ

ದಾನದಿಂದ ಗೌರವವು ಲಭ್ಯವಾಗುತ್ತದೆ. ಸದಾ ದಾನ ಮಾಡುವಂಥ ಮೋಡದ ಸ್ಥಾನವು ಮೇಲೆ. ಅಂತೆಯೇ ಸದಾ ಸಂಗ್ರಹಗುಣವುಳ್ಳ ಸಮುದ್ರದ ಸ್ಥಾನ ಕೆಳಗೆ ಎಂದು ತಿಳಿಸುತ್ತದೆ.

'ಹಸ್ತಸ್ಯ ಭೂಷಣಂ ದಾನಂ' ಕೈಗೆ ದಾನವೇ ಆಭರಣ. ಇತರ ಯಾವುದೇ ಒಡವೆಗಳಿಂದ ಅದು ಶೋಭಿಸಲಾರದು. ತನ್ನ ಶಕ್ತಿ ಇದ್ದಷ್ಟು ಸತ್ಪಾತ್ರರಿಗೆ ದಾನಮಾಡತಕ್ಕದ್ದು ಎಂದು ಧರ್ಮಶಾಸ್ತ್ರಗಳು ಹೇಳಿವೆ. ಅಧರ್ಮ ಮಾರ್ಗದಲ್ಲಿ ಹಣಗಳಿಸಿದವನ ದಾನವು ಸನ್ಯಾಸಿಯ ಮನಸ್ಸನ್ನೇ ಬದಲಾಯಿಸಿದ ಕತೆಯನ್ನು ನಾವು ಆಲಿಸಿದ್ದೇವೆ. ವೃಥಾವಾನಮ ಸಮರ್ಥೇಷು ಎನ್ನುವಂತೆ ಅಪಾತ್ರರಿಗೆ, ಅಕಾಲದಲ್ಲಿ ಕೊಟ್ಟ ದಾನವು ವ್ಯರ್ಥವಾಗುವುದು.

ಹಣಕ್ಕೆ ಮೂರು ಅವಸ್ಥೆಗಳಿವೆ. ಹಣವನ್ನು ಭೋಗಿಸಬೇಕು ಇಲ್ಲವೇ ದಾನಮಾಡಬೇಕು. ಇಲ್ಲವಾದಲ್ಲಿ ಅದಕ್ಕೆ ಮೂರನೇ ಗತಿಯಾದ ನಾಶವು ಪ್ರಾಪ್ತವಾಗುತ್ತದೆ.

ಗೋಭಿರ್ವಿಪ್ರೈಶ್ಚ ವೇದೈಶ್ಚ
ಸತೀಭಿಃ ಸತ್ಯವಾದಿಭಿಃ
ಅಲುಬ್ಧೈಃ ದಾನ ಶೀಲೈಶ್ಚ
ಸಪ್ತಭಿರ್ಧಾರ್ಯತೇ ಮಹೀ

ಹಸುಗಳಿಂದ, ಬ್ರಾಹ್ಮಣರಿಂದ, ವೇದಗಳಿಂದ, ಪತಿವ್ರತಾಸ್ತ್ರೀಯರಿಂದ ಸತ್ಯವಂತರಿಂದ ಆಶಾರಹಿತರಿಂದ ಮತ್ತು ದಾನಶೀಲರೆಂಬ ೭ ವಿಧದ ಜನರಿಂದ ಈ ಭೂಮಿಯು ಧರಿಸಲ್ಪಟ್ಟಿದೆ ಎಂಬುವನ್ನು ಅರಿತಾಗ ದಾನದ ವೈಶಿಷ್ಟ್ಯ ತಿಳಿಯುವುದು.

ಪ್ರಕೃತಿಯ ದಾನವನ್ನು ಅವಲಂಬಿಸಿಯೇ ಮನುಷ್ಯ ಬದುಕುತ್ತಾನೆ. ನೀರು, ಗಾಳಿ, ಆಹಾರ ಇಲ್ಲದ ಪ್ರಪಂಚವನ್ನು ನಾವು ಊಹಿಸುವುದಕ್ಕೇ ಆಗುವುದಿಲ್ಲ. ಪರೋಪಕಾರಾರ್ಥಮಿದಂಶರೀರಂ ಈ ದೇಹವನ್ನು ಕೂಡ ಪರೋಪಕಾರಕ್ಕಾಗಿಯೇ ಬಳಸಬೇಕು. ದಾನವನ್ನು ಅನೇಕಕಾರಣಗಳಿಗಾಗಿ ಕೊಡಲಾಗುತ್ತದೆ. ಪಾಪ ಪರಿಹಾರ್ಥವಾಗಿ ಹರಕೆ ತೀರಿಸಲು ಹಬ್ಬ ಹರಿದಿನ ಮುಂತಾದ ಉದ್ದೇಶಗಳಿಗಾಗಿ ದಾನಮಾಡಲಾಗುತ್ತದೆ. ಕನ್ಯಾದಾನವಂತೂ ಸರ್ವದಾನಗಳಲ್ಲೂ ಅತಿ ದುಬಾರಿಯಾದ ದಾನವಾಗಿ ಇಂದಿನ ದಿನಗಳಲ್ಲಿ ಪರಿಣಮಿಸಿದೆ. ಬ್ರಾಹ್ಮಣರಿಗೆ ದಾನ ಕೊಡುವುದು ಸರ್ವೇ ಸಾಮಾನ್ಯವಾಗಿ ನಾವು ಕಾಣುವ ಅಂಶವಾಗಿದೆ.

ಈಗಿನ ಕಾಲದಲ್ಲಿ ದಾನಕೊಡುವುದು ಒಂದು ಫ್ಯಾಷನ್ ಆಗಿ ಪರಿಣಮಿಸಿದೆ. ಪ್ರಸಿದ್ಧಿಗೆ ಬರಲು ಸಮಾಜದಲ್ಲಿ ತಮ್ಮನ್ನು ಗುರ್ತಿಸಿಕೊಳ್ಳಲು ಈ ರೀತಿಯ ಪ್ರಯತ್ನಗಳು ನಡೆಯುತ್ತಿರುತ್ತವೆ. ಆದರೆ ಇದು ನಿಜವಾದ ದಾನವಾಗದೇ ಸ್ವಾರ್ಥದಿಂದ ಕೂಡಿರುತ್ತದೆ. ಬಲಗೈಲಿ ದಾನಕೊಟ್ಟರೆ ಎಡಗೈಗೆ ಗೊತ್ತಾಗದಂತಿರಬೇಕು. ಅಂಥ ದಾನ ಮಾತ್ರ ನಿಜವಾದ ದಾನ ಎನಿಸಿಕೊಳ್ಳುತ್ತದೆ. ದಾನ ಮತ್ತು ಧರ್ಮವನ್ನು ತನಗೆ ನಾಳೆಯೇ ಮರಣವಿದೆ ಎಂದು ಅರಿತು ಆಚರಿಸಬೇಕು.

ಶಿಬಿ, ಹರಿಶ್ಚಂದ್ರ, ಕರ್ಣಮುಂತಾದ ದಾನಶೂರರ ಕಥೆಗಳು ನಮ್ಮಲ್ಲಿ ಪ್ರಚಲಿತದಲ್ಲಿವೆ. ಪರಲೋಕದಲ್ಲಿ ಸದ್ಗತಿ ಉಂಟಾಗುತ್ತದೆ, ಎಂಬ ನಂಬಿಕೆಯಿಂದ ಮಾಡಲಾಗುತ್ತದೆ. ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ ಎಂಬುದು ನಮ್ಮಲ್ಲಿನ ನಂಬಿಕೆ. ಸಾಯುವ ಸಮಯದಲ್ಲಿ ಪರದೇಶಿಯಂತೆ ಸತ್ತವರಿಗೆ ಯಾರಿಗಾದ್ರೂ ಕೊಟ್ಟಿದ್ರಲ್ಲೇ ತಮಗೂ ಇರೋದು ಎಂದು ಜನ ಉದ್ಗಾರತೆಗೆಯುವುದನ್ನು ನಾವು ನೋಡಿದ್ದೇವೆ. ದಾನದಿಂದ ಧರ್ಮ ಎಂಬ ಈ ನಂಬಿಕೆಯಿಂದಾಗಿಯೇ ನಮ್ಮಲ್ಲಿ ಭಿಕ್ಷುಕರು ಅಧಿಕವಾಗಿದ್ದಾರೆ. ದಾನದ ಇಂತಹ ದುರುಪಯೋಗ ಕೊನೆಗೊಳ್ಳಬೇಕಾದರೆ ನಮ್ಮ ನಂಬಿಕೆ ಸ್ವಲ್ಪ ಬದಲಾಗಬೇಕಾಗುತ್ತದೆ. ಆದರೆ ಇದು ಈಗಾಗಲೇ ನಮ್ಮ ಸಂಪ್ರದಾಯದಲ್ಲಿ ಆಳವಾಗಿ ಬೇರು ಬಿಟ್ಟಿರುವುದನ್ನು ಕಾಣಬಹುದು.

ಈಶ ನಿನ್ನ ಚರಣ ಭಜನೆ
ಆಶೆಯಿಂದ ಮಾಡುವೆನು
ದೋಷರಾಶಿ ನಾಶಮಾಡು ಶ್ರೀಶ ಕೇಶವ
ಶರಣುಹೊಕ್ಕೆನಯ್ಯ ಎನ್ನ
ಮರಣ ಸಮಯದಲ್ಲಿ ನಿನ್ನ
ಚರಣಸ್ಮರಣೆ ಕರುಣಿಸಯ್ಯ ನಾರಾಯಣ

--ಕನಕದಾಸರು.

### ತಿರುಮಲೆ ತಿರುಪತಿ ದೇವಸ್ಥಾನಗಳು -- ತಿರುಪತಿ.



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ



ತರುವೊಂದ ಬೆಳೆವವನು ದೇವರಾ ಸೇವಕನು
ಹರಿಪನವ ತಲೆಮಾರುಗಳಿಗೆಲ್ಲ ಕರುಣೆಯನು
ಹರಸುವರು ಅವನ, ಜನ, ಅವನೆಂದು ನೋಡದವರು



ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿ ತನ್ನ ಭಕ್ತರಿಗೆಂದೇ ನೀಡಿದ ಪ್ರಶಸ್ತ ವರವಾಗಿದೆ. ದೇವರು ಸ್ವಯಂವ್ಯಕ್ತನಾದ ತಿರುಮಲೆಯ ಪವಿತ್ರ ಪರ್ವತದ ಅಮೂಲ್ಯವಾದ ಕಾಡುಗಳನ್ನು ಪರಿರಕ್ಷಿಸಿಕೊಳ್ಳುವ ತೀವ್ರ ಆಕಾಂಕ್ಷೆಯಿಂದ ತಿರುಮಲೆ ತಿರುಪತಿ ದೇವಸ್ಥಾನಗಳು 1981 ರಲ್ಲಿ ಜೀವ ಸೌಂದರ್ಯಯೋಜನೆಯಡಿಯಲ್ಲಿ ತಿರುಪತಿ, ತಿರುಮಲೆಗಳಲ್ಲಿ 29 ಲಕ್ಷ ಗಿಡಗಳನ್ನು ಬೆಳೆಸುವ ಮಹತ್ವಾಕಾಂಕ್ಷೆಯ ಅರಣ್ಯಾಭಿವೃದ್ಧಿ ಕ್ರಮವನ್ನು ಕೈಗೊಂಡು ಕ್ರಿಯಾಶೀಲವಾಯಿತು. ಈ ಯೋಜನೆಯ ಮೂಲ ಉದ್ದೇಶ -- ತಿರುಪತಿಯ ತಪ್ಪಲು ಪ್ರದೇಶದಲ್ಲೂ, ತಿರುಮಲೆಯ ಪರ್ವತಾವಳಿಯಲ್ಲೂ ಜೈವಿಕ ವಾತಾವರಣವನ್ನು ಪರಿರಕ್ಷಿಸಿ ಸಂವರ್ಧಿಸುವುದು.

ಈ ಯೋಜನೆಯ ಸಾಫಲ್ಯದಿಂದ ಉತ್ತೇಜಿತರಾಗಿ ಉತ್ಸಾಹಿತರಾಗಿ ತಿರುಮಲೆ ತಿರುಪತಿ ದೇವಸ್ಥಾನಗಳು ಮತ್ತೂ ಹಲವಾರು ಕಾರ್ಯಕ್ರಮಗಳನ್ನು ಅದೇ ದಿಕ್ಕಿನಲ್ಲಿ ಹಮ್ಮಿಕೊಂಡಿದೆ. ಇದರ ಹೆಸರು--

## ಶ್ರೀ ವೆಂಕಟೇಶ್ವರ ವನಾಭಿವೃದ್ಧಿಯೋಜನೆ

ತಿ. ತಿ. ದೇ. ಗಳ ಅರಣ್ಯ ವಿಭಾಗ ಹಮ್ಮಿಕೊಂಡಿರುವ ಈ ಅರಣ್ಯಾಭಿವೃದ್ಧಿ ಯೋಜನೆಯಲ್ಲಿ ಸಾರ್ವಜನಿಕರೂ ಭಾಗವಹಿಸಬಹುದಾದ ವಿಶೇಷ ಅವಕಾಶವನ್ನು ಕಲ್ಪಿಸಲಾಗಿದೆ. ಈ ಯೋಜನೆಯ ಹಲವಾರು ಪ್ರಮುಖ ವಿವರಗಳನ್ನು ಪಟ್ಟಿ ಮಾಡಲಾಗಿದೆ.

**ವೃಕ್ಷಸಂವರ್ಧನ ಯೋಜನೆ :** ರೂ.೧೫೦೦೦ - ದಾನವನ್ನು ನೀಡುವವರ ಹೆಸರಿನಲ್ಲಿ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ೫೦೦ ಸಸಿಗಳನ್ನು ತಿರುಪತಿ ತಿರುಮಲೆ ಗಳಲ್ಲಿ ನೆಟ್ಟು ಐದು ವರ್ಷ ಅವುಗಳನ್ನು ನೋಡಿಕೊಳ್ಳಲಾಗುವುದು.

**ವೃಕ್ಷಪ್ರಸಾದ :** ರೂ.೧೫೦೦೦ - ದಾನವನ್ನು ನೀಡುವವರ ಪರವಾಗಿ ತಿರುಪತಿ, ತಿರುಮಲೆಯಲ್ಲಿ ಪ್ರತಿವರ್ಷ ೧೦೦ ಫಲ, ಪುಷ್ಪ ತರುಗಳನ್ನು ಬೆಳೆಸಲಾಗುವುದು. ಹತ್ತುವರ್ಷಗಳ ಕಾಲ ದಾನಿಗಳ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ಪ್ರತಿವರ್ಷ ೧೦೦ ಹೂ ಹಣ್ಣುಗಳ ಸಸಿಗಳನ್ನು ವಿತರಿಸಲಾಗುವುದು

**ಸ್ಮಾರಕ ವನಗಳು:** ರೂ ೫೦೦೦ ದಾನ ನೀಡುವವರ ಹೆಸರಿನಲ್ಲಿ ತಿರುಪತಿ ತಿರುಮಲೆಗಳಲ್ಲಿ ಹತ್ತುಮರಗಳನ್ನು ಒಂದೆಡೆ ನೆಟ್ಟು ಐದುವರ್ಷ ನೋಡಿಕೊಳ್ಳಲಾಗುವುದು.

**ವನ ಸಂರಕ್ಷಣ ಭಾಗಸ್ವಾಮ್ಯ:** ರೂ ೨೦೦೦ ದಾನದಿಂದ ದಾನಿಗಳ ಹೆಸರನ್ನು ಹಿರಿದಾಗಿ ಪ್ರಕಟಿಸುವ ಫಲಕದೊಡನೆ ತಿರುಮಲೆಯ ವನಾಚ್ಛಾದನೆಯನ್ನು ಸಂರಕ್ಷಿಸುವ ಯೋಜನೆಯಿದು.

**ಮುಖ್ಯ ಸೂಚನೆ:-** ೧. ಈ ಎಲ್ಲ ದಾನಗಳೂ, ೩೫ ಸಿ.ಸಿ.ಬಿ ಕಲಮಿನಂತೆ ನೂರು ಶತಾಂಶ ಆದಾಯಕರ ವಿಮುಕ್ತ ವಾಗಿರುತ್ತದೆ.

೨. ಈ ಪರಿಷ್ಕರಣಗಳು ೧-೨-೯೬ ರಿಂದ ಜಾರಿಗೆ ಬಂದಿವೆ. ಅದಕ್ಕೂ ಹಿಂದೆ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯಲ್ಲಿ ಸೇರಿದವರಿಗೆ ಹಳೆಯ ಸೌಲಭ್ಯಗಳು ಮುಂದುವರೆಯುತ್ತವೆ.

ತಿರುಮಲೆಯ ಅರಣ್ಯನಮ್ಮ ಪರಂಪರೆಯ ಅವಿಭಾಜ್ಯ ಅಂಗ. ಅದನ್ನು ಸಂರಕ್ಷಿಸಿ ಸಂವರ್ಧನಗೊಳಿಸುವ.

ದಶಕೂಪ ಸಮೋವಾಪಿ ದಶ ವಾಪಿ ಸಮೋ ಹ್ರದ
ದಶಹ್ರದ ಸಮಃ ಪುತ್ರ ದಶ ಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಮಕ್ಕಳು ಒಂದು ತರುವಿಗೂ ಸಮ.

ಈ ಉದಾತ್ತ ಯೋಜನೆಯಲ್ಲಿ ಪಾಲುಗೊಂಡು ಉದಾರವಾಗಿ ದಾನನೀಡಿ ತಿರುಮಲೆಯನ್ನು -- ಶ್ರೀ ವೆಂಕಟೇಶ್ವರಸ್ವಾಮಿ ನಿವಾಸವನ್ನು -- ವನಸಿರಿಯಿಂದಲೂ ಸೌಂದರ್ಯಸಿರಿಯಿಂದಲೂ ಕೂಡಿರುವಂತೆ ಮಾಡುವಲ್ಲಿ ಸಹಕರಿಸಬೇಕೆಂದು ಕೋರಲಾಗಿದೆ.



| |
|---|
| ದಾನಗಳ ಡಿ.ಡಿ. ಯನ್ನು ತಾವು ಕಳುಹಿಸ ಬೇಕಾದ ವಿಳಾಸ: |
| ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇವಸ್ಥಾನಗಳು, ತಿರುಪತಿ. |



ಕಾರ್ಯನಿರ್ವಹಣಾಧಿಕಾರಿ

# ಶ್ರೀಕೃಷ್ಣ ಚೈತನ್ಯಾಮೃತಂ

---ಕಂದಾಡೈ ಕೇಶವನ್.

## ಜನನ :

ಸುಮಾರು ೧೪೮೦ ಕ್ರಿಸ್ತಾಬ್ದದಲ್ಲಿ ಭಾರತದಲ್ಲಿ ಸಾಮಾಜಿಕ ರಾಜಕೀಯ ಧಾರ್ಮಿಕ ಮತ್ತು ನೈತಿಕ ಅಧಃಪತನವಾಗಿ ಎಲ್ಲೆಲ್ಲೂ ಧರ್ಮದ ಅವನತಿ ಕಂಡುಬಂದು, ಡಾಂಭಿಕತನ ಉದರಪೋಷಣೆಗಾಗಿ ವಂಚನೆ, ಮೋಸ, ಕರ್ಮಭ್ರಷ್ಟತೆಯಿಂದ ಜನರು ಅಧರ್ಮಮಾರ್ಗದಲ್ಲಿ ಹೋಗುತ್ತಿದ್ದರು. ಮಾಯಾವಾದಿಗಳು ಹೆಚ್ಚಾಗಿ ದೇವರಲ್ಲಿ ಭಕ್ತಿ ಕಮ್ಮಿಯಾಗಿ ಆಚರಣೆಯಲ್ಲಿ ಡಂಭಾಚಾರ ಕೃತ್ರಿಮತೆ ಹೆಚ್ಚಾಗಿತ್ತು. ಅಂತಹ ಸಮಯದಲ್ಲಿ ಬಂಗಾಳದ ನವದ್ವೀಪದಲ್ಲಿ ಪಂಡಿತ ಜಗನ್ನಾಥ ಮಿಶ್ರರೆಂಬವರಿಗೆ ಶಚೀದೇವಿ ಎಂಬುವ ಪತಿವ್ರತೆಯಾದ ಮಡದಿಯಲ್ಲಿ ಚೈತನ್ಯ ದೇವರ ಜನನ. ವಿಕ್ರಮ ಸಂವತ್ಸರದ ಫಾಲ್ಗುಣ ಮಾಸದ ಹುಣ್ಣಿಮೆದಿನ. ಹೋಳೀ ಹಬ್ಬದ ದಿನ ಮಗು ಹುಟ್ಟಿದ್ದರಿಂದ ಮಗುವಿಗೆ ವಿಶ್ವಂಭರನೆಂದು ನಾಮಕರಣ ಮಾಡಿದರು. ಮಗುವಿಗೆ ದೃಷ್ಟಿಯಾಗುವುದೆಂಬ ಭಯದಿಂದ ತಾಯಿ ಶಚೀದೇವಿ ಮಗುವಿಗೆ "ನಿಮಾಯಿ" ಎಂದು ಕರೆದಳು. ಶ್ರೀಕೃಷ್ಣ ಪ್ರೇಮಿ ಎಂಬುವ ವೈಷ್ಣವ ಭಕ್ತರು, ಚೈತನ್ಯರನ್ನು ಸಾಕ್ಷಾತ್ ಭಗವಾನ್ ಕೃಷ್ಣನ ಅಂಶವೆಂದು ತಿಳಿದು ಅವರ ಜನನವನ್ನು ಕುರಿತು-

ಪ್ರಾದುರಾಸೀತ್ ಹರಿಃ ಸಾಕ್ಷಾತ್
ನವದ್ವೀಪೇ ಮಹಾ ಪ್ರಭುಃ
ನಷ್ಟ ಭಾಗವತಂ ಧರ್ಮಂ
ಪುನರುದ್ಧರ್ತು ಮಚ್ಯುತಂ
ಫಾಲ್ಗುನೇ ಪೂರ್ಣಿಮಾಯಾಂ ತು
ರಾಹುಗ್ರಸ್ತೇ ನಿಶಾಕರೇ
ಅವತೀರ್ಣ ಗೌರಚಂದ್ರೋ
ಜಗದಾನಂದ ಕಾರಕಃ
ಜಾತಮಾತ್ರೇ ಜಗನ್ನಾಥೇ
ಸರ್ವತ್ರ ಸಕಲೈಃ ನರೈಃ
ಯದೃಚ್ಛಯಾ ಕೃತಂ ವಿಷ್ಣೋ
ಮಧುರಂ ನಾಮಕೀರ್ತನಂ

ಭಗವಾನ್ ಶ್ರೀಕೃಷ್ಣನೇ ನಷ್ಟವಾದ ಭಾಗವತ ಧರ್ಮದ ಉದ್ಧಾರಕ್ಕಾಗಿ, ಜಗದಾನಂದ ಕಾರಕನಾದ ಜಗತ್ಪತಿ ಜನಾರ್ದನನು ಗೌರಾಂಗನಾಗಿ ಹುಟ್ಟಿದನು - ಎಂಬುವುದಾಗಿ ಚೈತನ್ಯರ ಅವತಾರ ವಿಶೇಷವನ್ನು ಕೊಂಡಾಡಿದ್ದಾರೆ.

ದ್ವಾಪರ ಯುಗದಲ್ಲಿ ಗರ್ಗ ಋಷಿಯು ಶ್ರೀಕೃಷ್ಣ ಚೈತನ್ಯರು ಕಲಿಯುಗದಲ್ಲಿ ಹುಟ್ಟುವರೆಂದೂ ಅವರು ಗೌರಾಂಗ ವರ್ಣದವರಾಗಿ ಇರುತ್ತಾರೆ ಎಂಬುವುದಾಗಿ ತಿಳಿಸುವಾಗ ಸ್ಕಂದಮಹಾರಾಜರನ್ನು ಕುರಿತು ಗರ್ಗರು-

ಆಸನ್ ವರ್ಣಾಸ್ತ್ರಯೋಹ್ಯಸ್ಯ
ಗೃಹ್ಣತೋಽನುಯುಗಂ ತನುಃ
ಶುಕ್ಲೋ ರಕ್ತ ಸ್ತಥಾ ಪೀತ
ಇದಾನೀಂ ಕೃಷ್ಣತಾಂ ಗತಃ

ಎಂದು ಹೇಳುವಾಗ ದ್ವಾಪರಯುಗದಲ್ಲಿ ಹರಿ ಕೃಷ್ಣವರ್ಣ ಅನ್ಯಯುಗಗಳಲ್ಲಿ ಶುಕ್ಲ ರಕ್ತ ಹಾಗೂ ಪೀತವರ್ಣ ಎಂಬುವುದಾಗಿ. ಹುಟ್ಟಿದ ಮಗು ಸುವರ್ಣವರ್ಣ. ಗಲಿತ ಹೇಮದಂತಹ ಅಂಗ. ಸರ್ವಾಂಗ ಸುಂದರರೂಪ. ನವದ್ವೀಪ ಮಾಯಾಪುರದಲ್ಲಿ ಹುಟ್ಟಿದ ಈ ಮಗು ಮುಂದೆ ಲೋಕ ಪ್ರಖ್ಯಾತವಾದ ಶ್ರೀಕೃಷ್ಣಚೈತನ್ಯ ಪ್ರಭುವಾಗಿ ಮೆರೆದರು. ಚೈತನ್ಯರ ಜನನದ ದಿನ ಚಂದ್ರಗ್ರಹಣ ಗಂಗಾ ಸ್ನಾನ ಮಾಡಲು ಲಕ್ಷಾಂತರ ಜನ ಕೃಷ್ಣ ನಾಮ ಸಂಕೀರ್ತನೆ ಮಾಡುತ್ತಾ ಶುಚಿರ್ಭೂತರಾಗಿ ನೆರೆದಿದ್ದರು. ಸಿಂಹಲಗ್ನ, ಸಿಂಹರಾಶಿ ಗ್ರಹಗಳು ಉಚ್ಚಸ್ಥಾನಗಳಲ್ಲಿ ಇದ್ದವು. ಒಬ್ಬ ಮಹಾಪುರುಷನ ಜನನವಾಯಿ





# ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ದೇವಾಲಯ ಶ್ರೀನಿವಾಸ ಮಂಗಾಪುರ

# ನೂತನ ಆರ್ಜಿತ ಸೇವೆಗಳು

ದಿನೇ ದಿನೇ ಹೆಚ್ಚುತ್ತಿರುವ ಭಕ್ತರ ಸಂದಣಿಯ ಅಪೇಕ್ಷೆಯಂತೆ ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಎರಡು ಹೊಸ ಸೇವೆಗಳನ್ನು ಪ್ರವೇಶಗೊಳಿಸಲಾಗಿದೆ. ಅವುಗಳೆಂದರೆ -

## 1. ಶ್ರೀನಿವಾಸ ಅರ್ಚನಾ ದತ್ತಿಯೋಜನೆ :

ಹತ್ತು ವರ್ಷ ಕಾಲ ರೂ. 5000/- ದತ್ತಿ ನೀಡುವವರ ಅಪೇಕ್ಷೆಯ ದಿನದಂದು ವರ್ಷಕ್ಕೆ ಒಮ್ಮೆ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿಗೆ ಅರ್ಚನೆ ಮಾಡುವ ಅವಕಾಶ. ಈ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿಡಲಾಗುವುದು.

* ಈ ಸೇವೆಯಲ್ಲಿ ವ್ಯಕ್ತಿ, ಸಂಘ, ಸಂಸ್ಥೆಯ ಹೆಸರಿನಲ್ಲಿ ಅರ್ಚನೆ ನಡೆಸಬಹುದು.
* ದತ್ತಿ ನೀಡುವವರಿಗೆ ಅರ್ಚನೆಯ ದಿನವನ್ನು ನಿರ್ಧರಿಸುವ ಅವಕಾಶವಿದೆ.
* ದತ್ತಿ ನೀಡುವವರ ವರ್ಷಕ್ಕೆ ಒಮ್ಮೆ ಆಯ್ಕೆಯ ದಿನದಂದು ಅವರ ಕುಟುಂಬದ ಐದುಮಂದಿಗೆ ಅಷ್ಟೋತ್ತರ ಸಹಸ್ರನಾಮಾರ್ಚನೆಯ ವೇಳೆಯಲ್ಲಿ ಉಚಿತ ದರ್ಶನ ವುಂಟು.
* ಈ ಯೋಜನೆಯನ್ವಯ ದತ್ತಿ ನೀಡುವವರಿಗೆ ಒಂದು ಅಂಗವಸ್ತ್ರ, ಒಂದು ಕುಪ್ಪಸದ ಕಣದ ಬಹುಮಾನವುಂಟು.
* ಈ ದತ್ತಿಯನ್ವಯ ಅರ್ಚನಸೇವೆ ಹತ್ತು ವರ್ಷಕ್ಕೆ ಸೀಮಿತ.

## 2. ಅಭಿಷೇಕಾನಂತರ ವಸ್ತ್ರಾಲಂಕರಣ ಸೇವೆ :

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಶುಕ್ರವಾರಾಭಿಷೇಕದ ನಂತರ ವಸ್ತ್ರಾಲಂಕರಣಕ್ಕಾಗಿ ಭಕ್ತರು ವಸ್ತ್ರಕಾಣಿಕೆ ನೀಡುವುದು ಪದ್ಧತಿ. ಈ ದಿನಗಳಲ್ಲಿ ಹೆಚ್ಚಿರುವ ಯಾತ್ರಿಕ ಸಂದಣಿಯಿಂದಾಗಿ ಈ ವಸ್ತ್ರಕಾಣಿಗೆ ನೀಡಬಯಸುವ ಗೃಹಸ್ಥರು ಐದು ವರ್ಷಗಳಿಗೂ ಹೆಚ್ಚುಕಾಲ ಕಾಯಬೇಕಾಗುತ್ತದೆ. ಇಂತಹದೇ ವಸ್ತ್ರಕಾಣಿಕೆಯನ್ನು ಶ್ರೀನಿವಾಸ ಮಂಗಾಪುರದಲ್ಲೂ ಈಗ ಸ್ವೀಕರಿಸಲಾಗುವ ವಸ್ತ್ರಾಲಂಕರಣ ಸೇವೆಯನ್ನು ಪ್ರವೇಶಗೊಳಿಸಲಾಗಿದೆ.

* ಈ ಸೇವೆಯಲ್ಲಿ ತಿರುಮಲೆಯಲ್ಲಿಯಂತೆಯೇ ಪ್ರತಿ ಶುಕ್ರವಾರವೂ ಅಭಿಷೇಕಾನಂತರ ಸ್ವಾಮಿಗೆ ನೂತನ ಮೇಲ್ಚಾತ್ ಹಾಗೂ ಉತ್ತರೀಯದಿಂದ ಅಲಂಕರಣ ನಡೆಸಲಾಗುವುದು.
* ಭಕ್ತರಿಂದ ಈ ಸೇವೆಗಾಗಿ ವಸ್ತ್ರವನ್ನು (ಮೇಲ್ಚಾತ್ ಹಾಗೂ ಉತ್ತರೀಯ) ಅಥವಾ ಅದರ ಬೆಲೆ ರೂ. 15000/- ಸ್ವೀಕರಿಸಲಾಗುವುದು.
* ತಿರುಮಲೆಯಲ್ಲಿ ನಂತೆಯೇ ಭಕ್ತರ ಕಡೆಯ ಐದು ಮಂದಿಗೆ ಅಭಿಷೇಕ ದರ್ಶನದ ಏರ್ಪಾಡು ಮಾಡಲಾಗುವುದು.
* ಅಭಿಷೇಕಾನಂತರ ಗೃಹಸ್ಥರಿಗೆ ಒಂದು ಅಂಗವಸ್ತ್ರ ಹಾಗೂ ಒಂದು ಕುಪ್ಪಸದ ಕಣವನ್ನು ಬಹೂಕರಿಸಲಾಗುವುದು.

ಯಾತ್ರಿಕರು ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿಯ ಈ ಸೇವೆಗಳಲ್ಲಿ ಭಾಗವಹಿಸಿ ಅನುಕೂಲಗಳನ್ನು ಪಡೆಯಬಹುದಾಗಿದೆ.

**ತಿ.ತಿ.ದೇ.**



ತೆಂದು ಹರಿದಾಸರು ಸಂತೋಷಗೊಂಡರು. ಮಗುವಿನ ಜಾತಕರ್ಮಗಳನ್ನು ಪ್ರಸಿದ್ಧ ಹರಿದಾಸರಾದ ಚಂದ್ರಶೇಖರ ಆಚಾರ್ಯರು ನೆರವೇರಿಸಿದರು.

### ಬಾಲ ಲೀಲೆಗಳು

ಮಾಯಾ ಪುರವು ಕಲಕತ್ತೆಯಿಂದ ೮೦ ಮೈಲಿಗಳಷ್ಟು ದೂರವಿದೆ. ಎತ್ತನೋಡಲು ಸುಂದರವಾದ ಬತ್ತದ ಗದ್ದೆಗಳು. ಎರಡು ನದಿಗಳ ಸಂಗಮ ತಟದಲ್ಲಿ ಈ ಮಾಯಾಪುರ. ಸುಂದರ ಗೌರಾಂಗನು ಶುಕ್ಲ ಪಕ್ಷದ ಚಂದ್ರನಂತೆ ತನ್ನ ಬಾಲ ಲೀಲೆಗಳನ್ನು ಪ್ರದರ್ಶಿಸಲು ಪ್ರಾರಂಭಮಾಡಿದನು.

ಮಗುವಿಗೆ ದೃಷ್ಟಿ ಆಗದಿರಲು ದುಷ್ಟ ಶಕ್ತಿಗಳು ಕಾಡದಿರಲು, ನೆರಹೊರೆಯ ಹಿರಿಯರು ಶಿಶುವಿಗೆ ವಿಷ್ಣುರಕ್ಷೆ,ದೇವೀರಕ್ಷೆ, ನರಸಿಂಹಯಂತ್ರ ಮುಂತಾದ ರಕ್ಷಾಬಂಧನಗಳನ್ನು ಕಟ್ಟುತ್ತಿದ್ದರು. ಶಿಶುವು ಅತ್ತರೆ ಕೇವಲ ಹರಿನಾಮವನ್ನು ಹೇಳಿದರೆ ಅಳುವನ್ನು ನಿಲ್ಲಿಸುತ್ತಿತ್ತು. ತಾಯಿ ಹೊರಗೆ ಹೋದಾಗ ನಾಲ್ಕು ತಿಂಗಳ ಮಗು ಸುತ್ತಮುತ್ತಲಿನ ಸಾಮಾನುಗಳನ್ನು ಅಸ್ತವ್ಯಸ್ತಗೊಳಿಸಿ ತಾಯಿ ಹಿಂತಿರುಗಿದಾಗ ಸುಮ್ಮನೆ ನಿದ್ರೆ ಮಾಡುವಂತೆ ನಟಿಸುತ್ತಿತ್ತು. ನಿಮಾಯಿಯ ಅಭಿರುಚಿಯನ್ನು ಕಂಡುಹಿಡಿಯಲು ತಂದೆ ಜಗನ್ನಾಥ ಮಿಶ್ರರು ಮಗುವಿನ ಸಮೀಪ ಆಟದ ಸಾಮಾನುಗಳನ್ನು ಸ್ವರ್ಣ, ರಜತ ಹಾಗೂ ಭಗವದ್ಗೀತೆ ಪುಸ್ತಕವನ್ನು ತಂದಿರಿಸಿದರು. ನಿಮಾಯಿಯು (ಗೌರಾಂಗನು) ಇತರ ಸಾಮಾನುಗಳ ಕಡೆ ಗಮನ ಕೊಡಲಿಲ್ಲ. ಮಗು ಕೇವಲ ಭಗವದ್ಗೀತೆಯನ್ನು ಮಾತ್ರ ಕೈಲಿ ಎತ್ತಿಕೊಂಡಿತು. ರುಚಿ ಪರೀಕ್ಷೆಯ ಪ್ರಕಾರ ಮಗು ಮುಂದೆ ದೊಡ್ಡ ಮಹಾ ಪುರುಷನಾಗುವನೆಂದು ತಂದೆ ತಿಳಿದುಕೊಂಡರು. ಇನ್ನೊಮ್ಮೆ ಗೌರಾಂಗರಿಗೆ ನಾಲ್ಕು ವರುಷ ಮನೆ ಅಂಗಳದಲ್ಲಿ ಆಡುತ್ತಿದ್ದ. ಕರಿನಾಗರಹಾವು ಅಲ್ಲಿಗೆ ಹರಿದು ಬಂತು. ಸರ್ಪವು ಮಂಡಲಾಕಾರವಾಗಿ ಮಲಗಿತು. ಗೌರಾಂಗನು ಅದರ ಮೇಲೆ ಮಲಗಿ ಶೇಷಶಯನ ಲೀಲೆಯನ್ನು ಪ್ರಕಟಿಸಿದನು. ಅಕ್ಕಪಕ್ಕದವರು ಇದನ್ನು ಕಂಡು ಭಯಗೊಂಡು ಗರುಡನನ್ನು ಸ್ಮರಿಸಿದರು. ಹಾವು ತನ್ನ ಪಾಡಿಗೆ ತಾನು ದೂರ ಹೊರಟುಹೋಯಿತು. ಇನ್ನೊಮ್ಮೆ ಗೌರಾಂಗನಿಗೆ ತಾಯಿ ಚಿನ್ನದ ಆಭರಣಗಳನ್ನು ತೊಡಿಸಿದ್ದರು. ಮಗು ಹೊರಗೆ ಆಟವಾಡುತ್ತಿತ್ತು. ಇದನ್ನು ಕಂಡ ಕಳ್ಳನೊಬ್ಬ ಮಗುವನ್ನು ಅಪಹರಿಸಿಕೊಂಡು ಹೊರಟ. ಮಗುಲಿನ ಕಾಲು ಕಳ್ಳನ ಎದೆಗೆ ತಾಗುತ್ತಿತ್ತು. ಗೌರಾಂಗ ಕಳ್ಳನ ತಲೆಯನ್ನು ಸವರುತ್ತಿದ್ದ. ಕಳ್ಳನಿಗೆ ಅವ್ಯಾಜವಾದ ಮಗುವಿನ ಮೇಲೆ ಪ್ರೀತಿ ಉಂಟಾಯಿತು. ಕೆಟ್ಟ ಆಲೋಚನೆಯನ್ನು ತೊರೆದು ಮಗುವನ್ನು ಹಿಂತಿರುಗಿ ತಂದು ಮನೆಯ ಅಂಗಳದಲ್ಲಿ

ಬಿಟ್ಟು ತನ್ನ ತಪ್ಪಿಗಾಗಿ ಗೌರಾಂಗನ ಮಾತಾಪಿತೃಗಳಲ್ಲಿ ಕ್ಷಮಾಪಣೆ ಕೇಳಿದನು. ಇನ್ನೊಮ್ಮೆ ಗೌರಾಂಗನ ಮನೆಗೆ ಅತಿಥಿಯೊಬ್ಬರು ಬಂದರು. ಆತನು ಜಗನ್ನಾಥ ಮಿಶ್ರರಿಂದ ಸ್ವಯಂಪಾಕವನ್ನು ಸ್ವೀಕರಿಸಿ, ನೈವೇದ್ಯವನ್ನು ಮಾಡಿ ತನ್ನ ಆರಾಧನಾ ದೇವರಾದ ಬಾಲಗೋಪಾಲನಿಗೆ ಅರ್ಪಿಸಲು ಹೋದಾಗ ಗೌರಾಂಗನು ಬಂದು ನೈವೇದ್ಯ ಎಲ್ಲವನ್ನೂ ಭಕ್ಷಿಸಿದನು. ಇದನ್ನು ತಿಳಿದ ಮಿಶ್ರರು ದುಃಖಿತರಾಗಿ ಎರಡನೆಯ ಸಲ ಸ್ವಯಂಪಾಕವನ್ನು ಕೊಟ್ಟರು. ಎರಡನೆಯ ಸಾರಿ ನೈವೇದ್ಯವನ್ನು ಮಾಡಿ ದೇವರಿಗೆ ಅರ್ಪಿಸುವಾಗ ಮತ್ತೆ ಗೌರಾಂಗನು ಬಂದು ನೈವೇದ್ಯವನ್ನು ಭಕ್ಷಿಸಿದನು. ಇದರಿಂದ ದುಃಖಿತನಾದ ಅತಿಥಿ ಯಾತ್ರಿಕನು ಆಯಾಸದಿಂದ ಮಲಗಿ ನಿದ್ರಿಸಿದನು. ಆಗ ಗೌರಾಂಗನು ಪ್ರತ್ಯಕ್ಷವಾಗಿ "ಓ ಬ್ರಾಹ್ಮಣನೇ ಪ್ರತಿದಿನ ನೀನು ನನ್ನನ್ನು ಕುರಿತು ಧ್ಯಾನಮಾಡಿ ನೈವೇದ್ಯವನ್ನು ಅರ್ಪಿಸುತ್ತಿದ್ದೆ. ನಾನು ಹಿಂದೆ ನಂದ ನಂದನ ರೂಪದಲ್ಲಿ ಪ್ರಕಟನಾಗಿದ್ದೆ. ಈಗ ನಾನು ಅಷ್ಟ ಭುಜರೂಪದಲ್ಲಿ ಪ್ರಕಟನಾಗಿರುವೆ ನೋಡು" ಎನ್ನಲು, ಆ ವಿಪ್ರನು ಪರಮ ಅದ್ಭುತ ರೂಪವನ್ನು ಕಂಡ. ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ ಧರಿಸಿದ ಮುರಳೀಕೃಷ್ಣನನ್ನು ಕಂಡನು. ವಕ್ಷಸ್ಥಳದಲ್ಲಿ ಶ್ರೀವತ್ಸಲಾಂಛನ, ಕೌಸ್ತುಭಮಣಿಹಾರ, ಶಿರದಲ್ಲಿ ಮಯೂರಪುಚ್ಛ, ರಾರಾಜಿಸುವ ಮುಖ ಚಂದ್ರ, ಚಲಿಸುವ ನಯನಕಮಲಗಳು ಎದೆಯಲ್ಲಿ ವೈಜಯಂತೀ ಮಾಲೆ, ಕರ್ಣಗಳಲ್ಲಿ ಕಂಗೊಳಿಸುವ ಮಕರ ಕುಂಡಲಗಳು, ಕಾಲಿಗೆ ರತ್ನದ ನೂಪುರಗಳು, ಈ ಅದ್ಭುತ ರೂಪ ಕಂಡು ವಿಪ್ರನು ಮೂರ್ಛಿತನಾದ. ಎಚ್ಚೆತ್ತು ನೋಡಲು ಮಗು ಗೌರಾಂಗನು ವಿಪ್ರನ ತಲೆಯನ್ನು ಸವರುತ್ತಿದ್ದ.

ಈ ಘಟನೆಯನ್ನು ವೃಂದಾವನದಾಸ ಠಾಕೂರರು ತಮ್ಮ "ಶ್ರೀ ಚೈತನ್ಯ ಭಾಗವತ" ಎಂಬುವ ಗ್ರಂಥದಲ್ಲಿ ಬಹುರಮ್ಯವಾಗಿ ಚಿತ್ರಿಸಿದ್ದಾರೆ. ಮಗು ಹುಟ್ಟಿದಾಗ ತಂದೆ "ವಿಶ್ವಂಬರ"ನೆಂದು ನಾಮಕರಣ ಮಾಡಿದರೆ ತಾಯಿ ಮಗುವಿಗೆ ದೃಷ್ಟಿ ನಿವಾರಣೆಗಾಗಿ ಆಯಸ್ಸು ಹೆಚಲು 'ನಿಮಾಯಿ' ಎಂಬುವುದಾಗಿ ಕರೆದಳು. ಮುಂದೆ ಭಕ್ತರು ನಿಮಾಯಿಯನ್ನು ಗೌರಾಂಗನೆಂದು ಕರೆದರು. ಶಿಶಿರ ಕುಮಾರ್ ಘೋಷ್‌ರವರು ತಮ್ಮ Lord Gauranga ಎಂಬುವ ಗ್ರಂಥದಲ್ಲಿ He was also known as Shree Krishna Chaitanya, he who awakens God in the hearts of men ಎಂಬುವುದಾಗಿ ಉಲ್ಲೇಖಿಸಿದ್ದಾರೆ.

## ವಿದ್ಯಾಭ್ಯಾಸ

ಗೌರಾಂಗನ ಹಿರಿಯ ಅಣ್ಣ ವಿಶ್ವರೂಪ ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಿದ್ದ. ನಿಮಾಯಿ ಅಣ್ಣನ ಪಾಠ ಪ್ರವಚನೆಗಳನ್ನು ಕೇಳಿ ತಾನೂ ಅದರಂತೆ ಅನುಕರಣೆ ಮಾಡಿ ಹೇಳುತ್ತಿದ್ದ. ಕಾಲಕ್ರಮದಲ್ಲಿ ನಿಮಾಯಿಯೂ ಗುರುಕುಲವನ್ನು ಸೇರಿದ. ಗುರುಗಳು ಪಾಠ ಹೇಳುತ್ತಿದ್ದರೆ ಹುಡುಗ ಮಧುರವಾಗಿ ರಾಮ, ಕೃಷ್ಣ, ಗೋವಿಂದ, ಗೋಪಾಲ, ಮುರಾರಿ ಎಂಬುವುದಾಗಿ ಮಧುರಕಂಠದಿಂದ ಉಚ್ಚರಿಸುವಾಗ ಗುರುಕುಲದಲ್ಲಿ ಎಲ್ಲರೂ ಭಕ್ತಿಯಿಂದ ಮೈಮರೆಯುತ್ತಿದ್ದರು. ನಿಮಾಯಿಯ ಅಣ್ಣ ವಿಶ್ವರೂಪನಿಗೆ ಹದಿನೇಳು ವಯಸ್ಸು. ಮಾತಾಪಿತೃಗಳು ಈತನಿಗೆ ಮದುವೆ ಮಾಡಲು ಸಂಕಲ್ಪಿಸಿದರು. ವಿಶ್ವರೂಪನಾದರೋ ಬಾಲ್ಯದಿಂದಲೂ ಉದಾಸೀನ ಪ್ರವೃತ್ತನಾಗಿ ಐಹಿಕ ವಿಷಯದಲ್ಲಿ ಮನಸ್ಸಿಲ್ಲದೆ ಸಂಸಾರದಿಂದ ದೂರವಿರುವುದು ಲೇಸೆಂದು ಭಾವಿಸಿ ವಿವಾಹದ ಬಂಧನದಿಂದ ಮುಕ್ತನಾಗಲು ತೀರ್ಥಯಾತ್ರೆ ನೆಪದಲ್ಲಿ ಹೊರಟು ಸನ್ಯಾಸಾಶ್ರಮವನ್ನು ಸ್ವೀಕರಿಸಿದನು. ಇದನ್ನು ತಿಳಿದ ಮಿಶ್ರದಂಪತಿಗಳು ತಮ್ಮ ಎರಡನೆಯ ಮಗುವಾದ ನಿಮಾಯಿಯನ್ನು ಹೆಚ್ಚಿಗೆ ಪ್ರೀತಿಸಲು ಆರಂಭಿಸಿದರು. ದುಃಖಿತರಾದ ಮಾತಾಪಿತೃಗಳನ್ನು ನಿಮಾಯಿಯು ಸಂತೈಸುತ್ತಾ 'ಅಣ್ಣ ಸನ್ಯಾಸವನ್ನು ಸ್ವೀಕರಿಸಿ ಒಳ್ಳೆಯದನ್ನೇ ಮಾಡಿದ್ದಾನೆ. ಮಾತಾ ಪಿತೃಕುಲಗಳು ಉದ್ಧಾರವಾದವು. ನಿಮ್ಮ ಎರಡನೆಯ ಮಗನಾಗಿ ನಾನು ನಿಮ್ಮ ಸೇವೆಯನ್ನು ಮಾಡುತ್ತೇನೆ. ಚಿಂತಿಸದೇಡಿ,' ಎಂಬುವುದಾಗಿ ಹೇಳಿದನು.

ನಿಮಾಯಿಯ ಉಪನಯನ ಎಂಟನೆಯ ವಯಸ್ಸಿನಲ್ಲಿ ನೆರವೇರಿತು. ಮಿಶ್ರರು ನಿಮಾಯಿಯನ್ನು ಆಗಿನ ಕಾಲದ ಪಂಡಿತಶ್ರೇಷ್ಠರಾದ ಗಂಗಾದಾಸ ಪಂಡಿತರಲ್ಲಿ ಅಧ್ಯಯನ ಮಾಡಲು ಬಿಟ್ಟರು. ನಿಮಾಯಿ ಬೇರೆ ವಿದ್ಯಾರ್ಥಿಗಳಿಗಿಂತ ಬುದ್ಧಿಶಾಲಿಯಾಗಿ ವ್ಯಾಕರಣ, ನ್ಯಾಯ, ಮೀಮಾಂಸೆ, ವೇದಾಂತ ಶಾಸ್ತ್ರಗಳಲ್ಲಿ ಅತ್ಯಂತ ಪ್ರತಿಭೆಯನ್ನು ಗಳಿಸಿದನು. ಹುಡುಗನ ಬುದ್ಧಿಶಕ್ತಿ ಬಹು ಅಪೂರ್ವವಾಗಿತ್ತು. ಹದಿನೇಳು ವಯಸ್ಸಿಗೆ ನಿಮಾಯಿ ಸರ್ವಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಹೊಂದಿದನು. ನವದ್ವೀಪದ ದೊಡ್ಡ ವಿದ್ವಾಂಸರೆಲ್ಲರೂ ಈತನ ವಿದ್ವತ್ತಿಗೆ ಮುಗ್ಧರಾದರು. ನಿಮಾಯಿಯು ತಾನೇ ಸ್ವತಃ ಒಂದು ಪಾಠಶಾಲೆಯನ್ನು ತೆರೆದು ಅಧ್ಯಾಪನವನ್ನು ಪ್ರಾರಂಭಿಸಿದನು. ಈತನ ತರ್ಕ, ಮೀಮಾಂಸ ಬುದ್ಧಿ ಶಕ್ತಿಯನ್ನು ಕಂಡ ಇತರ ವಿದ್ವಾಂಸರು ಮೂಕರಾದರು. ಈತನ ಅಧ್ಯಾಪನ ಕೀರ್ತಿ ಎಲ್ಲಾ ಕಡೆ ಹರಡಿತು. ನಿಮಾಯಿ ಪಂಡಿತರಾಜನೆಂದೇ ಪ್ರಸಿದ್ಧಿಹೊಂದಿದನು. ಕೆಲವು ದಿನಗಳ ತರುವಾಯ ನಿಮಾಯಿಯ ತಂದೆ ರೋಗದಿಂದ ನರಳಿ ಕೃಷ್ಣನಾಮ ಸ್ಮರಣೆ ಮಾಡುತ್ತಾ ದೇವರ ಸನ್ನಿಧಿಗೆ ಸೇರಿದರು. ತಂದೆ ಸತ್ತಮೇಲೆ ತಾಯಿ ಹಾಗೂ ಸಂಸಾರದ ಭಾರ ನಿಮಾಯಿಗೆ ಬಂತು.

## ವಿವಾಹ

ನಿಮಾಯಿ ದೊಡ್ಡ ವಿದ್ವಾಂಸನೆಂದೂ ಗುಣವಂತನೆಂದೂ ಎಲ್ಲಾ ಕಡೆ ಪ್ರಚಾರವಾಯಿತು. ಪಾಠಶಾಲೆಗೆ ಬರುವರೆಲ್ಲರೂ ಈತನನ್ನು ಬಹಳ ಗೌರವದಿಂದ ಕಾಣುತ್ತಿದ್ದರು. ಯುಕ್ತ ವಯಸ್ಕನಾಗುತ್ತಿದ್ದ ಮಗನಿಗೆ ವಿವಾಹ ಮಾಡಬೇಕೆಂದು ಶಚೀದೇವಿಗೆ ಆಸೆ. ಮಗನನ್ನು ಕುರಿತು ಒಂದುದಿನ ಆಕೆ "ನಿಮಾಯಿ ನೀನು ಈಗ ಪ್ರಾಪ್ತ ವಯಸ್ಕನಾಗಿರುವಿ. ವಿದ್ಯಾವಂತ, ನೀನು ಏಕೆ ಮದುವೆ ಮಾಡಿಕೊಳ್ಳಬಾರದು, ನನಗೂ ವಯಸ್ಸು ಆಯಿತು. ಗೃಹ ಕೃತ್ಯಗಳನ್ನು ಎಂದಿನಂತೆ ನಾನು ಮಾಡಲಾರೆ. ಸೊಸೆ ಬರಬೇಕೆಂಬುದೇ ನನ್ನ ಆಸೆ. ನೀನು ಯಾವ ಹುಡುಗಿಯನ್ನು ಮದುವೆಯಾಗಲು ಇಚ್ಛೆ ಪಡುವೆಯೋ ಅದನ್ನು ನಾನು ಅನುಮೋದಿಸುತ್ತೇನೆ" ಎಂಬುವುದಾಗಿ ತಿಳಿಸಲು, ನಿಮಾಯಿಯು" ಅಮ್ಮಾ ಹಾಗಾದರೆ ಈ ನವದ್ವೀಪದಲ್ಲಿ ಶ್ರೀವಲ್ಲಭಾಚಾರ್ಯರೆಂಬ ವೈಷ್ಣವ ಬ್ರಾಹ್ಮಣರಿದ್ದಾರೆ. ಅವರಿಗೆ ಲಕ್ಷ್ಮೀದೇವಿ ಎಂಬುವ ಮಗಳು. ಅವರು ಬಡವರಾದರೂ ಶೀಲವಂತರು ಗುಣವಂತರು. ಆಕೆಯನ್ನು ನಾನು ಕೆಲವು ದಿನ ಹಿಂದೆ ಗಂಗಾ ಸ್ನಾನದ ಘಟ್ಟದಲ್ಲಿ ನೋಡಿದ್ದೇನೆ. ಆಕೆಯನ್ನು ಮದುವೆಯಾಗುವೆ" ಎಂಬುವುದಾಗಿ ತಿಳಿಸಿದನು. ಈ ವಿಷಯವನ್ನು ಕೇಳಿ ಆ ಊರಿನ ಹಿರಿಯರಾದ ವನಮಾಲ ಆಚಾರ್ಯರ ಮೂಲಕ ವಿವಾಹದ ಪ್ರಸ್ತಾಪವನ್ನು ವಲ್ಲಭಾಚಾರ್ಯನಿಗೆ ಶಚೀದೇವಿ ತಿಳಿಯಪಡಿಸಿದಳು. ಇವರ ಶುಭವಿವಾಹವನ್ನು ಶೀಘ್ರದಲ್ಲೆ ನೆರವೇರಿಸಿಕೊಡುವುದಾಗಿ ವಲ್ಲಭಾಚಾರ್ಯರು ಸಂತೋಷದಿಂದ ನುಡಿದರು ವಿವಾಹವು ಒಂದು ಶುಭ ದಿನ ನೆರವೇರಿತು. ಲಕ್ಷ್ಮೀದೇವಿ ಪಂಡಿತ ನಿಮಾಯಿಯ ಮನೆಯನ್ನು ಸೇರಿದಳು. ಸತಿಪತಿಗಳು ಅನ್ಯೋನ್ಯವಾಗಿ ಸುಖವಾಗಿ ಜೀವಿಸುತ್ತಿದ್ದರು. ನಿಮಾಯಿ ಪಂಡಿತನ ತರ್ಕವಾದವನ್ನು ಕೇಳಲು ಅನೇಕರು ಬೇರೆ ದೇಶಗಳಿಂದ ಬರುತ್ತಿದ್ದರು. ಈತನ ವ್ಯಾಖ್ಯಾನ ವೈಶಿಷ್ಟ್ಯ, ಪಂಡಿತರನ್ನು ತನ್ನವಾದ ವೈಖರಿಯಿಂದ ಸೋಲಿಸುವ ಧಾಟಿ ಎಂತಹವರನ್ನು ಮಂತ್ರ ಮುಗ್ಧರನ್ನಾಗಿ ಮಾಡುತ್ತಿತ್ತು. ವಿದ್ಯಾಚರ್ಚೆಗಾಗಿ ಅಧ್ಯಯನಕ್ಕಾಗಿ ನವದ್ವೀಪಕ್ಕೆ ವಿದ್ವಾಂಸರು ಬರುತ್ತಿದ್ದರು. ಆಗಿನ ಕಾಲದಲ್ಲಿ ಭಕ್ತಿ ತತ್ವಕ್ಕೆ ಸುಪ್ರಸಿದ್ಧ ಸನ್ಯಾಸಿ ಶ್ರೀಲ ಮಾಧವೇಂದ್ರಪುರಿ ಗೋಸ್ವಾಮಿಯ



## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

**ಶ್ರೀ ವೆಂಕಟೇಶ ಸುಪ್ರಭಾತ**
ವ್ಯಾಖ್ಯಾನ ಸಹಿತ ಬೆಲೆ : 2-50

**ಗುರು ಶ್ರೀಶ ವಿಠಲದಾಸರ ಕೃತಿಗಳು**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 6-00

**ದಾಸ ತತ್ತ್ವ ಪ್ರಕಾಶಿಕೆ**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 10-00

**ಸ್ತೋತ್ರ ಕುಸುಮ ಮಾಲಾ**
ಸಂ - ಎಂ. ಎಸ್. ವೆಂಕಟಾಚಲಂ ಬೆಲೆ : 3-00

**ತ್ಯಾಗರಾಜ ಸ್ವಾಮಿ ಕೃತಿಗಳ ಹಲವು ಮುಖಗಳು**
-ಎನ್. ಎಸ್. ಮೂರ್ತಿ ಬೆಲೆ : 5-00

**ಭಕ್ತ ಪುರಂದರದಾಸರು**
-ಕೆ. ಅಪ್ಪಣ್ಣಾಚಾರ್ಯ ಬೆಲೆ : 2-60

**ಕರ್ನಾಟಕ ಹರಿದಾಸರು**
ತೆಲುಗು, ಹಿಂದಿ, ಆಂಗ್ಲ, ಕನ್ನಡ ಬೆಲೆ : 2-25

**ಶ್ರೀ ಶ್ರೀನಿವಾಸನ ಹಾಡುಗಳು (ಪ್ರಸನ್ನ ವೆಂಕಟದಾಸರು)**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 7-00

**ಶ್ರೀ ಪ್ರಸನ್ನ ವೆಂಕಟದಾಸರು**
- ವಿ. ಬಾದರಾಯಣ ಮೂರ್ತಿ ಬೆಲೆ : 0-80

**ಶ್ರೀ ಮಹಿಪತಿ ದಾಸರು**
- ದ. ನ. ಶಾನಭಾಗ ಬೆಲೆ : 0-85

ಅಂಚೆ ವೆಚ್ಚ ಪ್ರತ್ಯೇಕ. ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು. ಕೂಡಲೇ ಬರೆಯಿರಿ.

**ಸಂಪಾದಕರು**
ಪುಸ್ತಕ ಮಾರಾಟ ವಿಭಾಗ,
ಸಪ್ತಗಿರಿ, ತಿ.ತಿ.ದೇ., ತಿರುಪತಿ.



ವರು ಗೌಡೀಯ ವೈಷ್ಣವ ಸಂಪ್ರದಾಯಕ್ಕೆ ಆದಿ ಗುರುಗಳು. ಇವರ ಪರಂಪರೆಯಲ್ಲಿ ಮಾಧವೇಂದ್ರಪುರೀ ಪಾದರ ಪ್ರಿಯಶಿಷ್ಯರಾದ ಈಶ್ವರ ಪುರೀ ಪಾದರು ತೇಜಃ ಪುಂಜರಾದ ವೈಷ್ಣವ ಸನ್ಯಾಸಿಗಳಾಗಿ ಸಮಸ್ತ ಭಾರತದ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸಿ ನವದ್ವೀಪಕ್ಕೆ ಬಂದರು. ಈ ಸನ್ಯಾಸಿಯ ಮಧುರವಾದ ಹರಿನಾಮ ಸಂಕೀರ್ತನೆಯನ್ನು ಕೇಳಿ ನಿಮಾಯಿಗೆ ಅವರಲ್ಲಿ ಭಕ್ತಿ ಭಾವ ಹುಟ್ಟಿತು. ನಿಮಾಯಿಯು ಪುರೀ ಪಾದರು ತಮ್ಮ ಮನೆಯಲ್ಲಿ ಕೃಷ್ಣಕಥಾಮೃತದ ಕಾಲಕ್ಷೇಪ ಮಾಡಬೇಕೆಂದು ಬೇಡಿಕೊಂಡರು. ತಮ್ಮ ಶ್ರೀಕೃಷ್ಣಲೀಲಾಮೃತ ಗ್ರಂಥವನ್ನು ಶ್ರೀ ಈಶ್ವರ ಪುರಿಯವರು ನಿಮಾಯಿಗೆ ನೀಡಿ ಅದರ ದೋಷಗಳನ್ನು ಪರಿಶೀಲಿಸುವಂತೆ ಕೇಳಿಕೊಂಡರು. ನಿಮಾಯಿ ಪಂಡಿತರಾದರೊ "ಸ್ವಾಮಿ ಭಕ್ತಿಯಿಂದ ತಾವು ರಚಿಸಿದ ಗ್ರಂಥದಲ್ಲಿ ಸಂಪೂರ್ಣವಾಗಿ ಗುಣಗಳಲ್ಲದೆ ದೋಷ ಎಲ್ಲಿಂದ ಬರಬೇಕು. ಅಲ್ಲಿ ದೋಷ ಹುಡುಕುವುದು ಮೂರ್ಖರ ಲಕ್ಷಣ. ಭಕ್ತರ ರಚನೆಗಳಿಂದ ಭಕ್ತಪರಾದೀನನಾದ ಭಗವಂತನು ಪ್ರೀತನಾಗುತ್ತಾನೆ. ಭಗವಂತನಿಗೆ ಪ್ರೀತಿಯಾದ ಗ್ರಂಥ ನಿರ್ದೋಷವಾದುದು" ಎಂಬುವುದಾಗಿ ತಮ್ಮ ಅಭಿಪ್ರಾಯ ತಿಳಿಸಿದರು.

ನಿಮಾಯಿ ಪಂಡಿತರು ತಮ್ಮ ಶಿಷ್ಯರೊಡನೆ ಪೂರ್ವ ಬಂಗಾಳದ ಕಡೆ ಪ್ರಯಾಣ ಹೊರಟರು. ಅವರು ಅನೇಕ ಊರುಗಳಲ್ಲಿ ವಿದ್ವಾಂಸರೊಡನೆ ವಾದಮಾಡಿ ವ್ಯಾಕರಣ ಅಲಂಕಾರ ಶಾಸ್ತ್ರಗಳಲ್ಲಿ ತಮ್ಮ ಅಪ್ರತಿಮ ಪ್ರತಿಭೆಯನ್ನು ತೋರಿಸುತ್ತಿದ್ದರು. ಪ್ರತಿದಿನ ಮಧ್ಯಾಹ್ನದ ಸಮಯದಲ್ಲಿ ಗಂಗಾತೀರದಲ್ಲಿ ಪಾಠ ಪ್ರವಚನ. ಇತ್ತ ನಿಮಾಯಿಯ ಊರಿನಲ್ಲಿ ಆತನ ಹೆಂಡತಿಗೆ ಜ್ವರ ಬಂದು ಶುಶ್ರೂಷೆ ಕೊರತೆಯಿಂದ ಆಕೆ ಸ್ವರ್ಗ ಸೇರಿದಳು. ನಿಮಾಯಿಯು ಊರಿಗೆ ಬಂದಮೇಲೆ ಈ ವಿಷಯ ತಿಳಿದು ಬಹಳ ದುಃಖವಾಯಿತು. ಆದರೂ ನಿಮಾಯಿಯು ತನ್ನ ಪಾಠ ಪ್ರವಚನಗಳನ್ನು ಮುಂದುವರಿಸಿದನು. ತಾಯಿಯ ಆದೇಶದಂತೆ ನಿಮಾಯಿಯು ಮೂರು ವರ್ಷಗಳ ತರುವಾಯ ಪಂಡಿತ ಸನಾತನ ಮಿಶ್ರರ ಮಗಳಾದ ವಿಷ್ಣುಪ್ರಿಯಾ ಎಂಬುವರೊಡನೆ ಮದುವೆಯಾಯಿತು. ಮದುವೆಯಾದ ಮೇಲೆ ನಿಮಾಯಿಯ ಮನೆಯಲ್ಲಿ ಪುನಃ ನಿತ್ಯವೂ ಆನಂದದ ಹೊಳೆ ಹರಿಯಿತು. ಶಚೀದೇವಿಯು ಸುಖವಾಗಿ ತಮ್ಮ ಕಾಲವನ್ನು ಕಳೆಯುತ್ತಿದ್ದರು. ಪ್ರತಿದಿನ ಮನೆಯಲ್ಲಿ ಶ್ರೀಕೃಷ್ಣನ ಪೂಜೆ, ಕೃಷ್ಣಕಥನ ನಡೆಯುತ್ತಿತ್ತು.

### ಸ್ನೇಹಿತನಿಗಾಗಿ ತ್ಯಾಗ

ಪ್ರಖ್ಯಾತರಾದ ವಾಸುದೇವ ಪಂಡಿತರ ಶಿಷ್ಯರು ರಘುನಾಥರು. ಆತ ಪ್ರಖ್ಯಾತ ನ್ಯಾಯಶಾಸ್ತ್ರ ಪಂಡಿತ. ನಿಮಾಯಿ ಹಾಗೂ ರಘುನಾಥ ಪಂಡಿತರು ಬಾಲ್ಯ ಸ್ನೇಹಿತರು. ರಘುನಾಥರು ನ್ಯಾಯಶಾಸ್ತ್ರದ ಬಗ್ಗೆ ಒಂದು ಗ್ರಂಥವನ್ನು ಬರೆದು ಮುಗಿಸಿದರು. ತನ್ನ ಸ್ನೇಹಿತನು ನ್ಯಾಯಶಾಸ್ತ್ರ ಗ್ರಂಥವನ್ನು ಬರೆಯುವ ವಿಷಯ ತಿಳಿಯದು. ನಿಮಾಯಿಯೂ ಕೂಡ ಒಂದು ಗ್ರಂಥವನ್ನು ಬರೆದರು. ಇಬ್ಬರೂ ಒಂದು ದಿನ ಪರಸ್ಪರ ತಮ್ಮ ಗ್ರಂಥಗಳ ಬಗ್ಗೆ ವಿಮರ್ಶಿಸಲು ಗಂಗಾನದಿಯನ್ನು ದಾಟುತ್ತಿರಲು ನೌಕೆಯಲ್ಲಿ ಪ್ರಾಸಂಗಿಕವಾಗಿ ರಘುನಾಥರು ತಮ್ಮ ಗ್ರಂಥವನ್ನು ಸ್ನೇಹಿತನಿಗೆ ಕೊಟ್ಟರು. ಇಬ್ಬರೂ ಪುಸ್ತಕಗಳನ್ನು ಓದಿಕೊಂಡರು. ನಿಮಾಯಿಯ ಪುಸ್ತಕವನ್ನು ಓದಿದ ಮೇಲೆ ರಘುನಾಥರಿಗೆ ಕಣ್ಣುಗಳಿಂದ ಧಾರಾಕಾರವಾಗಿ ಕಣ್ಣೀರು ಹರಿಯಲಾರಂಭಿಸಿತು. ಬಿಕ್ಕಳಿಸಿ ಅಳುತ್ತಿರುವ ರಘುನಾಥರನ್ನು ಬಿಗಿದಪ್ಪಿ "ಏಕೆ ಅಳುವೆ ರಘುನಾಥ, ಏನಾಯಿತು ತಿಳಿಸು" ಎಂದು ಕೇಳಿದರು.

ರಘುನಾಥರು "ಮಿತ್ರನೇ; ನ್ಯಾಯಶಾಸ್ತ್ರದ ಬಗ್ಗೆ ನಾವಿಬ್ಬರೂ ಗ್ರಂಥಗಳನ್ನು ಬರೆದಿರುವುದು ಸರಿಯಷ್ಟೇ. ನೀನು ಬರೆದ ಗ್ರಂಥ ಬಹಳ ಚೆನ್ನಾಗಿದೆ. ನಿನ್ನ ಗ್ರಂಥವನ್ನು ಓದಿದವರು, ಅದನ್ನು ಮೆಚ್ಚಿಕೊಳ್ಳುವರು ನನ್ನ ಪುಸ್ತಕ ಯಾರೂ ಓದಲಾರರು, ನನ್ನ ಗ್ರಂಥಕ್ಕೆ ಏನೂ ಬೆಲೆಯಿಲ್ಲ. ನಾನು ಮಾಡಿದ ಶ್ರಮವೆಲ್ಲವೂ ವ್ಯರ್ಥವಾಯಿತು" ಅದಕ್ಕಾಗಿ ಆನಂದ ಹಾಗೂ ದುಃಖಗಳ ಸಮ್ಮಿಳನವೇ ನನ್ನೀ ಕಣ್ಣೀರು. ನೀನು ಏನೂ ಅನ್ಯಥಾ ಬಾವಿಸಬೇಡ ನಿಮಾಯಿ" ಎಂಬುವುದಾಗಿ ಹೇಳಲು, ಸ್ನೇಹಿತನ ದುಃಖವನ್ನು ಕೇಳಿ ಸಹಿಸಲಾರದೆ ನಿಮಾಯಿ "ಮಿತ್ರನೇ ನೀನು ಚಿಂತಿಸಬೇಡ, ನೀನು ಸಂತೋಷವಾಗಿರಬೇಕು ನನ್ನ ಪುಸ್ತಕವು ಇದ್ದರೆ ತಾನೇ ನಿನ್ನ ಪುಸ್ತಕಕ್ಕೆ ಕುಂದು" ಎಂಬುವುದಾಗಿ ಹೇಳುತ್ತಾ ತನ್ನ ನ್ಯಾಯಶಾಸ್ತ್ರದ ಪ್ರತಿಯನ್ನು ಗಂಗಾನದಿಗೆ ಎಸೆದರು. ರಘುನಾಥರು "ಅಯ್ಯೋ ಮಿತ್ರಾ ನನಗೋಸ್ಕರ ನೀನು ಎಂತಹ ಕೆಲಸ ಮಾಡಿದೆ ಒಂದು ಉತ್ಕೃಷ್ಟವಾದ ಮಹಾ ನ್ಯಾಯಶಾಸ್ತ್ರ ಗ್ರಂಥ ನೀರು ಪಾಲಾಯಿತಲ್ಲ. ಜಗತ್ತಿಗೆ ಆ ಭಾಗ್ಯ ದೊರಕಲಿಲ್ಲವಲ್ಲ, ನೀನು ಮಹಾತ್ಯಾಗಿ ನಿಮಾಯಿ" ಎಂಬುವುದಾಗಿ ಕೊರಗಿದರು.

### ಶ್ರೀಕೃಷ್ಣ ಭಕ್ತಿ

ನಿಮಾಯಿ ಪೂರ್ವಬಂಗಾಳದಲ್ಲಿ ಪ್ರಯಾಣ ಮಾಡುತ್ತಿರುವಾಗ ತಪನಮಿಶ್ರರೆಂಬ ಭಾಗವತರ ದರ್ಶನವಾಯಿತು. ಅವರಿಗೆ ವಾಗ್ದಾನ ಮಾಡಿದಂತೆ ನಿಮಾಯಿ ತಂದೆಯ ತಿಥಿ ಮಾಡಲು ಗಯಾಕ್ಷೇತ್ರಕ್ಕೆ ಹೋದರು. ಗಯಾಕ್ಷೇತ್ರದ ಬ್ರಹ್ಮಕುಂಡದಲ್ಲಿ ಸ್ನಾನ ಪಿತೃಪೂಜೆ ಮುಗಿಸಿ ಭಗವಾನ್ ಗದಾಧರನ ಪಾದ

ಪದ್ಮಗಳಲ್ಲಿ ಪಿಂಡ ಪ್ರಧಾನ ಮಾಡಿದನು. ಗಯಾದಲ್ಲಿ ನಿತ್ಯವೂ ಕೃಷ್ಣಭಕ್ತಿಯನ್ನು ಪ್ರಚಾರಮಾಡುತ್ತಿದ್ದ ಈಶ್ವರ ಪುರಿ ಸನ್ಯಾಸಿಗಳ ಪುನರ್ದರ್ಶನ. ತನಗೂ ದೀಕ್ಷೆಕೊಡಲು ಅವರಲ್ಲಿ ಪ್ರಾರ್ಥನೆ. ಸಂಸಾರ ಜಂಜಾಟದಿಂದ ತನ್ನನ್ನು ಉದ್ಧಾರ ಮಾಡಲು ಮೊರೆ. ಈಶ್ವರ ಪುರಿಗಳು ನಿಮಾಯಿಯನ್ನು ಕಂಡು "ನಿಮಾಯಿ ನೀನು ನನಗೆ ಕೃಷ್ಣನಂತೆ ಕಾಣುವಿ, ನಿನಗೆಂತಹ ದೀಕ್ಷೆಯನ್ನು ನೀಡಲಿ, ನೀನು ಮಹಾ ಪಂಡಿತ ಭಗವದ್‌ಭಕ್ತ. ನೀನೇ ಕೃಷ್ಣ. ನಿನ್ನ ಚರಣ ಕಮಲಗಳ ದರ್ಶನ ಗಯಾಕ್ಷೇತ್ರದ ದರ್ಶನ. ಕೋಟಿ ಪಿತೃಗಳ ಉದ್ಧಾರ" ಎಂಬುವುದಾಗಿ ತಿಳಿಸಿದರೂ ನಿಮಾಯಿ ತನ್ನ ಪಟ್ಟು ಬಿಡದೆ ದೀಕ್ಷೆಯನ್ನು ಕೊಡಬೇಕೆಂದು ಪ್ರಾರ್ಥಿಸಿಕೊಂಡರು.

ಈಶ್ವರ ಪುರಿಗಳು ನಿಮಾಯಿಯ ಭಕ್ತಿಗೆ ಕರಗಿಹೋದರು. ಗುರುಗಳು ನಿಮಾಯಿಯ ಕಿವಿಯಲ್ಲಿ ಕೃಷ್ಣನ ದಶಾಕ್ಷರ ಗೋಪಾಲಮಂತ್ರವನ್ನು ಉಪದೇಶಿಸಿದರು. ತಕ್ಷಣವೇ ನಿಮಾಯಿಗೆ ಜ್ಞಾನೋದಯವಾಯಿತು. ಕೃಷ್ಣನನ್ನು ಕುರಿತು ಧ್ಯಾನ ಮಾಡತೊಡಗಿದರು. ಕೃಷ್ಣವಿರಹದಿಂದ ವ್ಯಾಕುಲಗೊಂಡರು. ಕೃಷ್ಣಭಕ್ತಿ ಅವರಲ್ಲಿ ವೃದ್ಧಿಯಾಗುತ್ತಾ ಬಂತು. ತಾನು ಗೋಪಿಯೆಂದು ತಿಳಿದು ಕೃಷ್ಣನನ್ನು ಕಾಣುವ ಆತುರತೆ ತೋರಿದರು. ಕೃಷ್ಣನನ್ನು ಕರೆಯುತ್ತ ಉನ್ಮತ್ತರಾಗಿ ಆರ್ತನಾದಮಾಡಿದರು. "ಕೃಷ್ಣ ನೀನು ನನ್ನ ಜೀವ ಸರ್ವಸ್ವ, ನನ್ನ ಹೃದಯವನ್ನು ಅಪಹರಿಸಿರುವಿ." ಎಂಬುವುದಾಗಿ ಆಕ್ರಂದಮಾಡಿದರು. ಭಗವದ್ಭಕ್ತಿ ಅವರಲ್ಲಿ ಹೆಚ್ಚಾಗುತ್ತಾ ಬರಲು ವಿದ್ಯಾರ್ಥಿಗಳಿಗೆ ಅಧ್ಯಯನ ಮಾಡಿಸುತ್ತಿರುವಾಗ ಕೃಷ್ಣನಾಮದ ಉಚ್ಚಾರಣೆ ಬರಲು ಕೃಷ್ಣ ಕೀರ್ತನೆ ಅವರ ಬಾಯಿಯಲ್ಲಿ ಬರುತ್ತಿತ್ತು. ಭಕ್ತಿಯ ಆವೇಶದಿಂದ ಕೀರ್ತನೆ ಮಾಡುತ್ತಾ ಕುಣಿಯುತ್ತಿದ್ದರು. ಶಿಷ್ಯರಿಗೆ "ಸತ್ಯವಾಗಿ ಸಕಲ ಶಾಸ್ತ್ರಗಳ ಮೂಲ ಶ್ರೀಕೃಷ್ಣ ವಿಷಯ. ಅವನೇ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣ ಭೂತನು. ಶ್ರೀಕೃಷ್ಣ ನಾಮಸ್ಮರಣೆ ಮಾಡದ ಜೀವನವು ವ್ಯರ್ಥ. ಸಕಲ ಆಗಮ ಶಾಸ್ತ್ರ ಪುರಾಣಗಳು ಶ್ರೀಕೃಷ್ಣಭಕ್ತಿಯೇ ಶ್ರೇಷ್ಠವೆಂದು ಸಾರುತ್ತದೆ. ಅನ್ಯ ದರ್ಶನಗಳು ವ್ಯರ್ಥ" ಎಂದರು. ನಿಮಾಯಿಯು ಪಾಣಿನಿ ವ್ಯಾಕರಣ ಸೂತ್ರಗಳನ್ನೆಲ್ಲ ಕೃಷ್ಣಪರವಾಗಿ ವ್ಯಾಖ್ಯಾನಮಾಡಿತೊಡಗಿದನು. ಇವರ ಶ್ರೀ ಹರಿನಾಮಾಮೃತ ವ್ಯಾಕರಣ ಗ್ರಂಥವು ಪಂಡಿತಪಾಮರರನ್ನು ರಂಜಿಸಿದೆ. ಭಕ್ತಿ ಮಾರ್ಗವನ್ನು ನರರಿಗೆ ಬೋಧಿಸಲು ಸಂಕಲ್ಪಿಸಿ ಅವರ ಸಾಧಕವಾಗಿ ಸಾಧುಸಂಗವನ್ನು, ಭಕ್ತರ ಸೇವೆಯನ್ನು ತಾನೂ ಆಚರಣೆಯಲ್ಲಿ ಪ್ರದರ್ಶಿಸಿ, ತತ್ವಜ್ಞಾನ ತನ್ನಿಷ್ಠಪರರಾದರು. ಎಲ್ಲಿ ಭಾಗವತರ ದರ್ಶನವಾದರೆ ಅವರಿಗೆ ಅಭಿವಂದನೆಯನ್ನು ಮಾಡತೊಡಗಿದರು. ತನ್ನ ಶಿಷ್ಯರನ್ನು ಕುರಿತು "ಶಿಷ್ಯರೇ ಶ್ರೀಕೃಷ್ಣನಾಮಸ್ಮರಣೆ ಬಹುಶ್ರೇಷ್ಠವಾದರು. ಸಕಲ ಜಗತ್ತಿಗೆ ಅವನೇ ಮೂಲಕಾರಣನು. ಸಮಸ್ತ ಚೇತನಾಚೇತನ ವಸ್ತುಗಳಿಗೆ ಆಧಾರ ಪುರುಷ ಅವನೇ. ಕೃಷ್ಣಭಕ್ತಿ ಇಲ್ಲದ ಸೌಂದರ್ಯ, ವಿದ್ಯೆ ಐಶ್ವರ್ಯ ನಿಷ್ಫಲ" ಎಂಬುವುದಾಗಿ ಬೋಧಿಸುತ್ತಿದ್ದರು. ನಿಮಾಯಿಯ ಕೃಷ್ಣಭಕ್ತಿಯ ಸುದ್ದಿ ಎಲ್ಲಾ ಕಡೆ ಹರಡಿತು. ಆತನ ಭಜನೆ ಕೀರ್ತನೆ ಉಪದೇಶಾಮೃತ ಎಲ್ಲಾ ಕಡೆ ಹರಡಲು ಆತನನ್ನು ನೋಡಲು ಅಕ್ಕ ಪಕ್ಕದ ರಾಜ್ಯಗಳಿಂದ ನವದ್ವೀಪಕ್ಕೆ ಜನರು ಬರಲು ಪ್ರಾರಂಭಿಸಿದರು. ಗೌರಾಂಗರು ಸಂಕೀರ್ತನೆ ಮಾಡುತ್ತಿರಲು ಅವರ ಅಂತರಂಗ ಭಕ್ತರಾದ ನಿತ್ಯಾನಂದ, ಹರಿದಾಸ, ಗದಾಧರ, ಶ್ರೀವಾಸ, ಪುಂಡರೀಕ ವಿದ್ಯಾನಿಧಿ, ಮುರಾರಿಗುಪ್ತ, ಗಂಗಾದಾಸ, ವನಮಾಲಿ, ನಂದನಾಚಾರ್ಯ, ಶ್ರೀಧರಪಂಡಿತ, ಬ್ರಹ್ಮಾನಂದ ಮುಂತಾದವರೂ ಕೂಡ ತನ್ಮಯತೆಯಿಂದ ನೃತ್ಯವನ್ನು ಮಾಡುತ್ತಿದ್ದರು. ಒಮ್ಮೆ ಶ್ರೀವಾಸ ಪಂಡಿತರ ಮನೆಯಲ್ಲಿ ಸಂಕೀರ್ತನೆ ಆಗುತ್ತಿರಲು ಗೌರಾಂಗರು ಒಂದೊಂದಾಗಿ ವಿಷ್ಣುವಿನ ಎಲ್ಲಾ ಅವತಾರಗಳನ್ನೂ ಭಕ್ತರಿಗೆ ತೋರ್ಪಡಿಸಿದರು. ವೈಷ್ಣವ ಭಕ್ತರೆಲ್ಲಾ ಪುರುಷಸೂಕ್ತದ ಘೋಷದೊಡನೆ ಗೌರಾಂಗರಿಗೆ ಧೂಪ, ದೀಪ, ಅರ್ಘ್ಯಪಾದ್ಯ ನೈವೇದ್ಯಗಳನ್ನು ಅರ್ಪಿಸಿದರು. ಗೌರಾಂಗರು ಭಾಗವತ ಅಪಚಾರ ಮಹಾದೊಡ್ಡದು. ಅದರಿಂದ ದೇವರು ಕೋಪಗೊಳ್ಳುವನು ಎಂಬುವುದಾಗಿ ಭಕ್ತ ಅಂಬರೀಷರ ನಿದರ್ಶನಗಳನ್ನು ಕೊಡುತ್ತಿದ್ದರು. ಪಂಡಿತ ಶ್ರೀಧರನ ಭಕ್ತಿಗೆ ಮೆಚ್ಚಿ ಆತನಿಗೆ ಅಷ್ಟಸಿದ್ಧಿಗಳನ್ನು ತಾನು ನೀಡುವೆನೆಂದು ತಿಳಿಸಲು, ಪಂಡಿತರು ನೈಷ್ಠಿಕ ಭಕ್ತಿಯಿಂದ ಪ್ರಭುವಿನ ಕೃಪೆ ನನಗೆ ಜನ್ಮ ಜನ್ಮಗಳಲ್ಲಿ ಉಂಟಾಗಲಿ ನನಗೆ ಮೋಕ್ಷ ಸಿದ್ಧಿಗಳಿಗಿಂತ ಆತನ ಚರಣ ಕಮಲಗಳ ಸಾಮಿಪ್ಯವೇ ನನಗೆ ಶ್ರೇಯಸ್ಸು ಎಂಬುವುದಾಗಿ ತಿಳಿಸಿದನು.

ಚೈತನ್ಯರು ಜಾತಿ, ಕುಲ, ವಿದ್ಯೆ, ಪಾಂಡಿತ್ಯಕ್ಕಿಂತ ಭಗವಂತನ ಭಕ್ತಿಗೆ ಹೆಚ್ಚು ಪ್ರಾದಾನ್ಯಕೊಡುತ್ತಿದ್ದರು. ಹರಿದಾಸ ಎಂಬುವ ಭಕ್ತನು ಪ್ರತಿದಿನ ಹತ್ತುಸಾವಿರ ಹರಿನಾಮ ಮಾಡುತ್ತಿದ್ದ. ಆತನು ಯವನ ಜಾತಿಯಲ್ಲಿ ಹುಟ್ಟಿದವ. ಈತನನ್ನು ಚೈತನ್ಯರು ನಾಮಾಚಾರ್ಯರೆಂದು ಕರೆದು ಗೌರವಿಸಿದರು. ನಿರ್ಮಲವಾದ ಭಕ್ತಿಯಿಂದ ಮಾತ್ರ ದೇವರು ಸಂತುಷ್ಟನಾಗುತ್ತಾನೆ. ಧರ್ಮದಲ್ಲಿ ಉಪಾಸ್ಯ ನಿಷ್ಠೆ ಅತ್ಯಂತ ಅವಶ್ಯಕವೆಂದೇ ಚೈತನ್ಯರ ಉಪದೇಶ.

## ನಿಮಾಯಿಯ ಸನ್ಯಾಸ ಸ್ವೀಕಾರ

ಶ್ರೀವಾಸ ಪಂಡಿತರ ಮನೆಯಲ್ಲಿ ಗೌರಾಂಗರ ಸಂಕೀರ್ತನೆ ನಡೆಯುತ್ತಿತ್ತು. ಆಗ ಪಂಡಿತರ ಏಕೈಕ ಪುತ್ರನ ನಿಧನವಾಯಿತು. ಇದನ್ನು ತಿಳಿದ ಗೌರಾಂಗರು ಏಕೆ ಇಂತಹ ದುರ್ಘಟನೆ ನಡೆಯಿತು, ಎಂಬುವುದಾಗಿ ನುಡಿಯಲು ಮೃತಪುತ್ರನು ಚೇತರಿಸಿಕೊಂಡು "ಪ್ರಭುವೇ ನಿನ್ನ ಅಪ್ಪಣೆಯಂತೆ ಇದುವರೆಗೂ ಇಲ್ಲಿ ಇದ್ದೆ, ನಿನ್ನ ಆಜ್ಞೆಯಂತೆ ಬೇರೊಂದು ಮನೆಯನ್ನು ಹುಡುಕಿ ಹೊರಟಿರುವೆ" ಎಂಬುವುದಾಗಿ ನುಡಿಯಿತು. ಶ್ರೀವಾಸರ ದುಃಖ ಶಮನವಾಯಿತು. ಪ್ರಭು ಚೈತನ್ಯರ ಮಹಿಮೆ ಕೊಂಡಾಡಿದರು. ಈ ಘಟನೆ ಆದನಂತರ ಗೌರಾಂಗರು ಗೃಹತ್ಯಾಗಮಾಡಲು ನಿಶ್ಚಯಿಸಿದರು. ತಾಯಿಗೂ ಹೆಂಡತಿಗೂ ತಾನು ಸಂಸಾರತ್ಯಾಗ ಮಾಡಿ ಸನ್ಯಾಸಿಯಾಗುವ ಇಚ್ಛೆಯನ್ನು ಪ್ರಕಟಿಸಿದನು. ಒಂದು ದಿನ ರಾತ್ರಿ ಹೆಂಡತಿ ತಾಯಿಯನ್ನು ತೊರೆದು ಮನೆ ಬಿಟ್ಟುಹೊರಟ. ಕತ್ತಲಿನಲ್ಲಿ ಶ್ರೀಕೃಷ್ಣನು ತೋರಿದ ದಾರಿಯಲ್ಲಿ ನಡೆದ ಗಂಗಾನದಿಯನ್ನು ದಾಟಿ ಕಾಟೋವಾ ಎಂಬ ಗ್ರಾಮಕ್ಕೆ ಬಂದು ಅಲ್ಲಿನ ಪ್ರಸಿದ್ಧ ಸನ್ಯಾಸಿಗಳಾಗಿದ್ದ ಶ್ರೀ ಕೇಶವಭಾರತಿ ಎಂಬುವುದರಲ್ಲಿ ಸನ್ಯಾಸ ಸ್ವೀಕಾರಮಾಡಿದರು. ಚೈತನ್ಯರ ಆಪ್ತಗೆಳೆಯರಾದ ನಿತ್ಯಾನಂದ, ಗದಾಧರ, ಚಂದ್ರಶೇಖರ ಮತ್ತು ಬ್ರಹ್ಮಾನಂದ ಹಾಗೂ ಮುಕುಂದರು ಇವರ ಸನ್ಯಾಸಸ್ವೀಕಾರ ಮಾಡುವ ವಿಧಿಯಲ್ಲಿ ಪಾಲ್ಗೊಂಡಿದ್ದರು. ತಾಯಿಗೆ ನಿಮಾಯಿಯಾಗಿದ್ದ, ಸ್ನೇಹಿತರಿಗೆ ಗೌರಾಂಗರಾಗಿದ್ದ, ಮಹಾಪುರುಷ ಸನ್ಯಾಸ ಸ್ವೀಕಾರ ಮಾಡಿದ ಮೇಲೆ ಕೇಶವ ಭಾರತಿಯವರು "ಶ್ರೀಕೃಷ್ಣ ಚೈತನ್ಯ" ಎಂಬುವ ಸನ್ಯಾಸ ನಾಮವನ್ನು ಘೋಷಿಸಿದರು. ಕಲೌ ಶ್ರೀಕೃಷ್ಣ ಸಂಕೀರ್ತನಂ ಎಂಬುವ ತತ್ವವನ್ನು ಪ್ರಚಾರಮಾಡಲು ಬದ್ಧಕಂಕಣ ತೊಟ್ಟರು. ಲೋಕದ ಉದ್ಧಾರಕ್ಕಾಗಿ ಸಂಸಾರತ್ಯಾಗ ಮಾಡಿದ ಶ್ರೀ ಚೈತನ್ಯರು ಕೃಷ್ಣಪ್ರೇಮದಿಂದ ಮತ್ತರಾಗಿ ವಿಪ್ರಲಂಭ ಭಾವದಲ್ಲಿ ಶ್ರೀಕೃಷ್ಣ ತತ್ವವನ್ನು ಅರಸುತ್ತ, ಬೋಧಿಸುತ್ತಾ ಜಗತ್ತಿಗೆ ಶ್ರೀಕೃಷ್ಣ ತತ್ವದ ಸವಿಯನ್ನು ನೀಡಲು ಒಂದು ಊರಿಂದ ಇನ್ನೊಂದು ಊರಿಗೆ ಶಿಷ್ಯಕೋಟಿ ಜೊತೆ ಸಂಕೀರ್ತನೆ ಮಾಡುತ್ತಾ ಹೊರಟರು. ಶ್ರೀಕೃಷ್ಣ ಸೇವೆ ಒಂದೇ ಜಗತ್ತಿನ ಜನರಕಲ್ಯಾಣ. ಭಕ್ತರು ಭಗವಂತನ ನಾಮಸ್ಮರಣೆಯಿಂದ ಮಾತ್ರ ಸಂಸಾರ ಬಂಧನಗಳಿಂದ ಮುಕ್ತರಾಗಬಹುದು. ಎಂಬುವುದಾಗಿ ಉಪದೇಶ ಮಾಡುತ್ತ ಭಾರತ ದರ್ಶನವನ್ನು ಮಾಡತೊಡಗಿದರು. ಇವರು ಹೋದ ಕಡೆ ಅನೇಕರು ಇವರ ಭಕ್ತರಾದರು. ಅವರು ಶ್ರೀಕೃಷ್ಣಚೈತನ್ಯರ ಬಗ್ಗೆ ಹಲವಾರು ಗ್ರಂಥಗಳನ್ನೂ ಬರೆದರು. ನೀಲಾಚಲದಲ್ಲಿ ಚೈತನ್ಯರು ಸಂಚರಿಸುವಾಗ ಮಾಧವೇಂದ್ರ ಮತ್ತು ಗೋಪೀನಾಥ ಪಂಡಿತರನ್ನು ಹರಸಿದರು. ಶ್ರೀಕೃಷ್ಣ ಚೈತನ್ಯರು ಜಗನ್ನಾಥ ದೇವಾಲಯಕ್ಕೆ

ಬಂದು ತಮ್ಮ ಉಸಿರಾದ ಜಗನ್ನಾಥನನ್ನು ಆಲಂಗಿಸಲು ಧಾವಿಸಿ ಭಾವ ಸಮಾಧಿಯಲ್ಲಿ ಮೂರ್ಛೆಗೊಂಡರು. ನಿತ್ಯಾನಂದರು ಶ್ರೀಕೃಷ್ಣ ಸಂಕೀರ್ತನೆ ಮಾಡಲು ಚೈತನ್ಯರು ಮೂರ್ಛೆಯಿಂದ ಎದ್ದು ಕುಳಿತರು.

ಪೂರಿ ಜಗನ್ನಾಥ ದೇವರ ಸನ್ನಿಧಿಯಲ್ಲಿ ಭಾವ ಸಮಾದಿಗ್ರಸ್ಥರಾದ ಶ್ರೀಕೃಷ್ಣ ಚೈತನ್ಯರನ್ನು ಕಂಡ ರಾಜ ಪ್ರತಾಪರುದ್ರರ ಆಸ್ಥಾನ ಪಂಡಿತರಾದ ವಾಸುದೇವ ಭಟ್ಟಾಚಾರ್ಯರು ಈ ವಿಷಯವನ್ನು ರಾಜರಿಗೆ ತಿಳಿಸಿದನು. ಭಟ್ಟಾಚಾರ್ಯರು ಶ್ರೀಕೃಷ್ಣಚೈತನ್ಯರು ತಂಗಲು ತಮ್ಮ ಪಿತ್ರಾರ್ಜಿತ ಗೃಹವನ್ನು ನೀಡಿ ಅವರಿಗೆ ಎಲ್ಲಾ ತರಹ ಸೌಕರ್ಯಗಳನ್ನು ಕಲ್ಪಿಸಿದರು. ಭಟ್ಟಾಚಾರ್ಯರು ಆಗಿನಕಾಲದಲ್ಲಿ ಅದ್ವೈತ ವೇದಾಂತದಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪ್ರದರ್ಶಿಸಿ ಸಾರ್ವಭೌಮತ್ವವನ್ನು ಪಡೆದಿದ್ದರು. ವಾಸುದೇವ ಸಾರ್ವಭೌಮರು ಚೈತನ್ಯರಿಗೆ ಬ್ರಹ್ಮಸೂತ್ರ ಶಂಕರ ಭಾಷ್ಯವನ್ನು ಏಳುದಿನ ಉಪದೇಶಿಸಿದರು. ಎಂಟನೆಯದಿನ ಶ್ರೀ ಚೈತನ್ಯರು ವಾಸುದೇವ ಸಾರ್ವಭೌಮರ ಆಜ್ಞೆಯಂತೆ ತಾನು ತಿಳಿದ ಶ್ರೀ ಭಾಷ್ಯದ ತಾತ್ಪರ್ಯವನ್ನು ತಿಳಿಸುತ್ತಾ "ಸಾರ್ವಭೌಮರೇ ಭಗವಂತನು ಸರ್ವಶಕ್ತಿವಂತನು ಅವನು ನಿರಾಧಾರನಲ್ಲ. ಸಚ್ಚಿದಾನಂದರೂಪನು ಸಮಸ್ತ ಅವಾಪ್ತಕಾಮನಾದ ಭಗವಂತ ನಿರಾಕಾರನಲ್ಲ. ಭಗವಂತನ ಸೃಷ್ಟಿಯಾದ ಈ ಜಗತ್ತು ಮಿಥ್ಯೆಯಲ್ಲ, ಸತ್ಯ. ನಿರಾಕಾರವೂ, ನಿರ್ಗುಣವೂ ನಿಶ್ಶಕ್ತವೂ ಆದ ಬ್ರಹ್ಮವು ಜಗತ್ತಿನ ಕಾರಣವಾಗಲಾರದು.

"ಶೂನ್ಯದಿಂದ ಯಾವ ವಸ್ತುವೂ ಹುಟ್ಟಲಾರದು. ಸಮಸ್ತ ಶ್ರುತಿ ಸ್ಮೃತಿ, ಇತಿಹಾಸ ಪುರಾಣಗಳು ಪರಮಾತ್ಮನ ಅನಂತ ಗುಣಗಳನ್ನು ಹೊಗಳುತ್ತವೆ. ಎಲ್ಲಾ ಶಾಸ್ತ್ರಗ್ರಂಥಗಳೂ ಶೂನ್ಯವನ್ನು ಪ್ರತಿಪಾದಿಸುವುದಿಲ್ಲ. ಇವು ಭಗವಂತನ ಪ್ರಾಕೃತ ವಿಶೇಷವನ್ನು ನಿಷೇಧಿಸಿ ಅಪ್ರಾಕೃತ ವೈಶಿಷ್ಟ್ಯವನ್ನು ಸ್ಥಾಪಿಸುತ್ತವೆ. ಶಂಕರಾಚಾರ್ಯರು ಕಪಾಲಿಕ ಮತವನ್ನು ಖಂಡಿಸಲು ದುಷ್ಟವಾಮಾಚಾರಪಂಥಗಳನ್ನು ನಿರ್ನಾಮ ಮಾಡಲು ಮಾಯಾವಾದರೂಪವಾದ ಅದ್ವೈತ ಮತವನ್ನು ಪ್ರಚಾರ ಮಾಡಿದರು. ಅದು ಆಗಿನ ಯುಗಧರ್ಮಕ್ಕೆ ಅವಶ್ಯಕತೆ ಇತ್ತು. ಕೃಷ್ಣಾನಂದವೆಂಬ ಮಹಾಸಾಗರದಲ್ಲಿ ಬ್ರಹ್ಮಾನಂದವು ಒಂದು ಬಿಂದುವಿಗೆ ಸಮಾನ. ಕೇವಲ ಸಂಸಾರಿಕ ದುಃಖಗಳಿಂದ ನಿವೃತ್ತಿಯನ್ನು ಹೊಂದುವುದೇ ಮುಕ್ತಿಯಲ್ಲ ಮುಕ್ತಿರ್ಹಿತ್ವಾನ್ಯಥಾ ರೂಪಂ ಸ್ವರೂಪೇಣ ವ್ಯವಸ್ಥಿತಃ ಎಂಬಂತೆ ಜೀವಾತ್ಮನು ತನ್ನ ನಿತ್ಯಸ್ವರೂಪವನ್ನು ಪಡೆಯುವುದೇ ಮುಕ್ತಿ, ಭಗವಂತನಂತೆಯೇ ಆತ್ಮನೂ ಅವಿನಾಶಿ. ತನ್ನ ನಿತ್ಯಸ್ವರೂಪನಾದ ಶ್ರೀಕೃಷ್ಣ ದಾಸ್ಯವನ್ನು ಹೊಂದುವುದೇ ನಿಜವಾದ ಮುಕ್ತಿ. ಶಾಶ್ವತವಾದ ಶ್ರೀಕೃಷ್ಣ ಸಾಯುಜ್ಯವನ್ನು ಹೊಂದದ ಜೀವಾತ್ಮ ಹಲವು ಜನ್ಮಗಳನ್ನು ಮತ್ತೆ ಪಡೆಯದೇ ಕಾಗುತ್ತೆ.

"ಶ್ರುತಿಸ್ಮೃತಿಗಳ ಮುಖ್ಯಾರ್ಥವಾದ ಅಭಿಧಾವೃತ್ತಿಯನ್ನು ಅವಲಂಬಿಸಿ ವ್ಯಾಸಮಹರ್ಷಿಗಳು ತಮ್ಮ ಸೂತ್ರಗಳನ್ನು ರಚಿಸಿದ್ದಾರೆ. ಮುಖ್ಯಾರ್ಥಗಳನ್ನು ತಿಳಿಯದೆ ಲಕ್ಷಣಾವೃತ್ತಿಯ ಮೂಲಕವಾಗಿ ಗೌಣಾರ್ಥಗಳನ್ನು ಹೇಳುವ ಮಾಯಾವಾದವು ಸ್ವೀಕಾರವಲ್ಲ. ಉದಾಹರಣೆಗೆ ಪ್ರಾಣಿಗಳ ಅಸ್ಥಿಯೂ, ಮಲವೂ ಅತ್ಯಂತ ಅಪವಿತ್ರ ಆದರೆ ಪ್ರಾಣಿಗಳ ಅಸ್ಥಿಯಾದ ಶಂಖುವೂ ಪ್ರಾಣಿಯ ಮಲವಾದ ಗೋಮಯವೂ ಪವಿತ್ರವಾಗಿರುವಂತೆ ಶಾಸ್ತ್ರಗಳ ಸಹಜವಾದ ಮುಖ್ಯಾರ್ಥಗಳನ್ನು ನಾವು ಸ್ವೀಕಾರ ಮಾಡಬೇಕು" ಎಂಬುವುದಾಗಿ ಶ್ರೀಕೃಷ್ಣ ಚೈತನ್ಯರು ಅಚಿಂತ್ಯ ಭೇದಾಭೇದ ಸಿದ್ಧಾಂತವನ್ನು ಬೋಧಿಸಿದರು. ಭಾಗವತದ "ಆತ್ಮಾರಾಮಾಶ್ಚ ಮುನಯೋ ನಿರ್ಗ್ರಂಥಾಃಪ್ಯುರುಕ್ರಮೇ ಕುರ್ವಂತ್ಯಹೈತುಕಿಂ ಭಕ್ತಿಮಿತ್ಥಂ ಭೂತ ಗುಣೋಹರಿಃ" ಎಂಬುವ ಶ್ಲೋಕವ ಅರ್ಥವನ್ನು ಹದಿನೆಂಟು ವಿಧವಾಗಿ ವ್ಯಾಖ್ಯಾನ ಮಾಡಿ ಕೊನೆಯಲ್ಲಿ ಶ್ರೀ ಹರಿಯಲ್ಲಿ ವಿಶಿಷ್ಟ ಆಕರ್ಷಣ ಶಕ್ತಿಯಿರುವುದರಿಂದ ಅದರಿಂದ ಆಕರ್ಷಿತ

ರಾಗಿ ಆತ್ಮಾರಾಮ ಮುನಿಗಳೂ ಕೂಡ ಪರಮ ಪುರುಷನಾದ ಶ್ರೀಹರಿಯನ್ನು ಅಹೈತುಕೀ ಭಕ್ತಿಯಿಂದ ಪೂಜಿಸಿವರು ಎಂಬುವುದಾಗಿ ಹೇಳಿದರು.

ಶ್ರೀಕೃಷ್ಣ ಚೈತನ್ಯರ ಅದ್ವಿತೀಯವಾದ ವ್ಯಾಖ್ಯಾನ ವಿವರಣೆಯನ್ನು ಕೇಳಿದ ವಾಸುದೇವ ಸಾರ್ವಭೌಮರು ಶ್ರೀಕೃಷ್ಣ ಚೈತನ್ಯದಲ್ಲಿ ಶರಣಾಗತಿಹೊಂದಿ ಅವರ ಶಿಷ್ಯರಾದರು. ಭಕ್ತಿ ಪರವಶರಾದ ಇವರು "ಶ್ರೀ ಚೈತನ್ಯ ಶತಕ" ಎಂಬುವ ಒಂದು ನೂರು ಶ್ಲೋಕಗಳಿಂದ ಅವರನ್ನು ಸ್ತುತಿಸಿದರು. ಪ್ರತಾಪರುದ್ರ ಗಜಪತಿಯ ಸಾಮಂತರಾಜರಾದ ಗೋದಾವರೀ ಪ್ರದೇಶದ ರಾಮಾನಂದ ರಾಯರೂ ಶ್ರೀ ಚೈತನ್ಯರ ಭಕ್ತರಾದರು. ನೀಲಾಚಲದಲ್ಲಿ ಕೆಲವು ದಿನ ಕಳೆದಮೇಲೆ ಶ್ರೀ ಚೈತನ್ಯರು ದಕ್ಷಿಣಭಾರತದ ಯಾತ್ರೆಗೆ ಹೊರಟರು. ಅವರು ಹೋದಕಡೆ ಅಸಂಖ್ಯರಾದ ಜನರು ಅವರ ದರ್ಶನ ಲಾಭವನ್ನು ಪಡೆಯುತ್ತಿದ್ದರು. ಅವರ ಬಾಯಿಂದ ಸದಾ ಕೃಷ್ಣನಾಮ ಸಂಕೀರ್ತನೆ, ಮಧುರವಾದ ಹರಿನಾಮ ಸ್ಮರಣೆ, ಕುಣಿಯುತ್ತಾ ಅವರು ಹಾಡುತ್ತಿದ್ದ ಕೀರ್ತನೆ--

ಕೃಷ್ಣ ಕೃಷ್ಣ, ಕೃಷ್ಣ ಕೃಷ್ಣ,
ಕೃಷ್ಣ ಕೃಷ್ಣ ರಕ್ಷಮಾಮ್
ಕೃಷ್ಣ ಕೃಷ್ಣ, ಕೃಷ್ಣ ಕೃಷ್ಣ,
ಕೃಷ್ಣ ಕೃಷ್ಣ ಪಾಹಿಮಾಮ್

ಅಬಾಲ ವೃದ್ಧರನ್ನು ಆಕರ್ಷಿಸಿ ಎಲ್ಲರೂ ಮತ್ತರಾಗಿ ರಾಗತಾಳಲಯದೊಡನೆ ಉನ್ಮತ್ತರಾಗಿ ಹಾಡಿ ಕುಣಿಯುತ್ತಿದ್ದರು. ಹೀಗೆ ಅವರು ದಕ್ಷಿಣ ದೇಶದಲ್ಲೆಲ್ಲಾ ತಮ್ಮಕೃಷ್ಣತತ್ವವನ್ನು ಪ್ರಚಾರಮಾಡಿದರು.

ಸಿಂಹಾಚಲದಲ್ಲಿರುವ ಭಗವಾನ್ ನರಸಿಂಹನ ಸೇವೆಯನ್ನು ಮಾಡಿ ಗೋದಾವರೀನದಿ ತೀರವನ್ನು ಸೇರಿದರು. ರಾಜಮಂಡ್ರಿಯ ಕೋಟಿಲಿಂಗಂ ತೀರ್ಥವನ್ನು ಸಂದರ್ಶಿಸಿ ಗೋಷ್ಪದ ತೀರ್ಥವನ್ನು ತಲುಪಿದರು. ಇಲ್ಲಿಯೇ ಶೂದ್ರರಾದ ರಾಮಾನಂದ ಮಹಾರಾಜರ ಭಕ್ತಿಗೆ ಸೋತು ಸನ್ಯಾಸಿಯಾದ ಚೈತನ್ಯರು ಆಲಂಗಿಸಿ ಭಾಗವತ ಧರ್ಮವನ್ನು ಉಪದೇಶಿಸಿದರು. ಸ್ವಧರ್ಮರೂಪವಾದ ವರ್ಣಾಶ್ರಮ ಧರ್ಮಪಾಲನೆಯ ಮೂಲಕ ವಿಷ್ಣುವನ್ನು ಹೊಂದಬಹುದು ಎಂಬುವುದಾಗಿ ವಿಷ್ಣುಪುರಾಣದ ಈ ಶ್ಲೋಕಕ್ಕೆ ಒಂದು ದಿನ ಪೂರ್ತಿ ಅರ್ಥವನ್ನು ತಿಳಿಸಿದರು. "ವರ್ಣಾಶ್ರಮಾಚಾರವತಾ ಪುರುಷೇಣ ಪುರು ಪುಮಾನ್ ವಿಷ್ಣುರಾರಾಧ್ಯತೇ ಪಂಥಾ ನಾನ್ಯತ್ತತ್ತೋಷ ಕಾರಣಮ್" ಮುಂದೆ ಈ ರಾಮಾನಂದರೇ ಪದ್ಯಾವಳೀ ಎಂಬುವ ಉತ್ಕೃಷ್ಟವಾದ ಗ್ರಂಥವನ್ನು ಚೈತನ್ಯರ ಬಗ್ಗೆ ರಚಿಸಿದರು. ಶುಷ್ಕವಾದ ಪೂಜೆ ಉಪಚಾರಗಳು ಭಗವಂತನಿಗೆ ಪ್ರೀತಿಯಲ್ಲ. ಮಾಡುವ ಪೂಜೆ ಉಪಚಾರಗಳು ಪ್ರೇಮದಿಂದ ಭಕ್ತಿಯಿಂದ ಕೂಡಿದ್ದರೆ ಮಾತ್ರ ಭಕ್ತರ ಹೃದಯಗಳು ಆನಂದದಿಂದ ದ್ರವೀಭೂತವಾಗುತ್ತವೆ ಎಂಬುವ ಅಂಶವನ್ನು ತಮ್ಮ ಪದ್ಯಾವಳಿಯಲ್ಲಿ ರಾಮಾನಂದರು "ನಾನೋಪಚಾರ ಕೃತ ಪೂಜನಮಾರ್ತ ಬಂಧೋಃ, ಪ್ರೇಮ್ಣೈವ ಭಕ್ತಹೃದಯಂ ಸುಖ ವಿದ್ರುತಂ ಸ್ಯಾತ್" ಎಂಬುವುದಾಗಿ ತಿಳಿಸಿದ್ದಾರೆ.

ಮಹಾಭಕ್ತರಾದ ರಾಮಾನಂದರಿಂದ ಕೃಷ್ಣ ಚೈತನ್ಯರು ಶ್ರೀಮದ್ಭಾಗವತ, ಗೀತ ಗೋವಿಂದ ಉಜ್ವಲನೀಲಮಣಿಗ್ರಂಥಗಳ ಪರಿಚಯವನ್ನು ಮತ್ತೆ ಕೇಳಿ ಸಂತೋಷಗೊಂಡರು. ಕೃಷ್ಣಸ್ವರೂಪ ಶ್ರೀ ರಾಧಾ ತತ್ವವನ್ನು ರಾಮಾನಂದರಿಂದ ಕೇಳಿ ತಿಳಿದ ಕೃಷ್ಣ ಚೈತನ್ಯರು ವಿಪ್ರನೋ, ಸನ್ಯಾಸಿಯೋ, ಶೂದ್ರನೋ ಯಾರಾದರೇನು ಯಾರು ಶ್ರೀಕೃಷ್ಣನ ತತ್ವಗಳನ್ನು ತಿಳಿದು ಅವನ್ನು ಪ್ರಚಾರಮಾಡುವವನೋ ಅವನೂ ಕೂಡ ನನಗೆ ಗುರು ಎಂಬುವುದಾಗಿ ತಮ್ಮನೈಚ್ಯಾನುಸಂಧಾನವನ್ನು ಪ್ರದರ್ಶಿಸಿದರು. ಶ್ರೀಕೃಷ್ಣನು ಸಚ್ಚಿದಾನಂದಸ್ವರೂಪನು. ಆತನು ಅನಾದಿ ಪರಮೇಶ್ವರನು. ಸರ್ವಕಾರಣಭೂತನು ಎಂಬುವುದಾಗಿ ಹೇಳುವಾಗ-

"ಈಶ್ವರಃ ಪರಮ ಕೃಷ್ಣಃ
ಸಚ್ಚಿದಾನಂದ ವಿಗ್ರಹಃ
ಅನಾದಿರಾದಿರ್ಗೋವಿಂದಃ
ಸರ್ವಕಾರಣ ಕಾರಣಮ್"

ಎಂಬುವುದಾಗಿ ಸಾರಿದರು. ಯಶೋದಾನಂದನನು ಶ್ರೀಕೃಷ್ಣ ಭಕ್ತರಿಗೆ ಸುಲಭವಾಗಿ ಲಭಿಸುವನು. ದೇಹಾಭಿಮಾನಿಗಳಿಗೂ, ತಪಸ್ವಿಗಳಿಗೂ ಜ್ಞಾನಿಗಳಿಗೂ ವಿರಾಗಯುಕ್ತರಾದ ಆತ್ಮಾರಾಮರಿಗೂ ಸುಲಭನಲ್ಲ.

"ನಾಯಂ ಸುಖಾಪೋ ಭಗವಾನ್
ದೇಹಿನಾಂ ಗೋಪಿಕಾಸುತಃ
ಜ್ಞಾನಿನಾಂ ಚಾ ತ್ಮಭೂತಾನಾಂ
ಯಥಾ ಭಕ್ತಿಮತಾಮಿಹ"

ರಾಮಾನಂದರು ತಮ್ಮ ರಾಜ್ಯವನ್ನು ತೊರೆದು ಕೃಷ್ಣ ಚೈತನ್ಯರ ಹಿಂಬಾಲಕರಾಗಿ ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾ ನಡೆದರು. "ಶ್ರೀ ಚೈತನ್ಯ ಚರಿತಾಮೃತ"ವೆಂಬ ಗ್ರಂಥವನ್ನು ರಚಿಸಿದ ಕೃಷ್ಣದಾಸ ಕವಿರಾಜ ಗೋಸ್ವಾಮಿಯವರು ಇವರಿಬ್ಬರ ಚರಿತ್ರೆಯನ್ನು ಬಹು ಸುಂದರವಾಗಿ ಚಿತ್ರಿಸಿದ್ದಾರೆ. ತರುವಾಯ ಕೃಷ್ಣ ಚೈತನ್ಯರು ಕೃಷ್ಣಾನದಿಯನ್ನು ದಾಟಿ ಮಂಗಳಗಿರಿಬೆಟ್ಟದ ಪಾನಕ ನರಸಿಂಹರ ದರ್ಶನ ಪಡೆದರು. ಮುಂದೆ ಶ್ರೀಶೈಲ ಕ್ಷೇತ್ರ ಅಹೋಬಿಲ ಕ್ಷೇತ್ರ, ಸಿದ್ಧವಟದ ಶ್ರೀರಾಮರ ದರ್ಶನ, ಮುಂದೆ ವೆಂಕಟಗಿರಿ, ಕಾಳಹಸ್ತಿ ಸಂದ



★★★★★★★★★★★★★★★★★

## ಪ್ರಕಟನೆ

### ಆಲಯಗಳಿಗಾಗಿ ಶ್ವೇತ ಛತ್ರಗಳ ನೀಡಿಕೆ



ವಿವಿಧ ಹಿಂಮೂ ದೇವಾಲಯಗಳಿಗಾಗಿ ಧ್ವನಿ ವರ್ಧಕ ಸಾಮಗ್ರಿಯನ್ನು ರಿಯಾಯಿತಿ ದರದಲ್ಲಿ ನೀಡುವಂತೆಯೇ ಶ್ವೇತ ಛತ್ರಗಳನ್ನು ರಿಯಾಯಿತಿ ದರಗಳಲ್ಲಿ ವಿವಿಧ ದೇವಾಲಯಗಳಿಗಾಗಿ ನೀಡುವ ಯೋಜನೆಯಿದೆ. ಇದಕ್ಕಾಗಿ ವಿವಿಧ ಆಲಯಗಳ ಅಧಿಕಾರಿಗಳು ತಮ್ಮ ಅಭ್ಯರ್ಥನ ಪತ್ರಗಳನ್ನು ಕಳುಹಿಸಬಹುದು. ಕೊಡೆಗಳ ರಿಯಾಯಿತಿ ದರ ರೂ 1050. ಈ ಹಣದ ಡಿ. ಡಿ. ಯನ್ನು ಕಾರ್ಯನಿರ್ವಹಣಾಧಿಕಾರಿ, ತಿ. ತಿ.ದೇ. ತಿರುಪತಿ - ಇವರ ಹೆಸರಿನಲ್ಲಿ ಪಡೆದು ಆಯಾ ಜಿಲ್ಲೆಗಳ ಮುಜರಾಯಿ ಇಲಾಖೆಯ ಅಸಿಸ್ಟೆಂಟ್ ಕಮಿಷನರ್ ಅವರ ಮೂಲಕ ಅರ್ಜಿಗಳನ್ನು ಕಳುಹಿಸಬೇಕು.

ವಿವಿಧ ದೇವಾಲಯಗಳ ಧರ್ಮಕರ್ತರು, ಅಧಿಕಾರಿಗಳು ತಮ್ಮ ಆಲಯಕ್ಕೆ ಕೊಡೆಗಳ ನೀಡಿಕೆಯ ಪತ್ರ ಸೇರಿದ ನಂತರ ತಿರುಪತಿಯಿಂದ ಕೊಡೆಗಳನ್ನು ಪಡೆಯಬೇಕಾಗುತ್ತದೆ.

ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇವಸ್ಥಾನಗಳು

ತಿರುಪತಿ (ಆಂಧ್ರಪ್ರದೇಶ)

★★★★★★★★★★★★★★★★★

ರ್ಶನ ಮಾಡಿ ತಿರುಪತಿಗೆ ಬಂದು ಸೇರಿದರು. ಶ್ರೀ ವೆಂಕಟೇಶ್ವರ ದರ್ಶನ ಪಡೆದು ವಿಷ್ಣುಕಂಚಿಯ ವರದರಾಜಸ್ವಾಮಿಯ ಸೇವೆಯನ್ನು ಮಾಡಿದರು. ಮತ್ತೆ ವೃದ್ಧಕಾಶಿ, ವೃದ್ಧಾಚಲ, ಚಿದಂಬರ ಕ್ಷೇತ್ರ ಕುಂಭಕೋಣದ ಶಿವನನ್ನು ಸಂದರ್ಶಿಸಿ ಕಾವೇರಿ ಪುಣ್ಯಕ್ಷೇತ್ರದ ಶ್ರೀರಂಗಕ್ಕೆ ಬಂದರು. ನದಿ ಸ್ನಾನಮಾಡಿ ಶ್ರೀರಂಗನಾಥನ ದರ್ಶನ ಪಡೆದ ಚೈತನ್ಯರು ಪ್ರೇಮ ನಿಷ್ಠರಾಗಿ ಕೀರ್ತನೆ ನರ್ತನ ಮಾಡತೊಡಗಿದರು. ಅಲ್ಲಿಯ ವೆಂಕಟಭಟ್ಟರೆಂಬುವರು ಇವರಿಗೆ ಭಿಕ್ಷೆ ನೀಡಿ, ಚಾತುರ್ಮಾಸ್ಯದಲ್ಲಿ ಶ್ರೀರಂಗದಲ್ಲಿ ಕಾಲಕ್ಷೇಪಮಾಡಲು ಬೇಡಿಕೊಂಡರು. ಚೈತನ್ಯರ ದರ್ಶನ, ಕೀರ್ತನ, ಉಪದೇಶಗಳನ್ನು ಕೇಳಲು ಅನೇಕ ವೈಷ್ಣವರು ಅಕ್ಕಪಕ್ಕದ ಊರುಗಳಿಂದ ಬಂದು ಚೈತನ್ಯರ ಅನುಗ್ರಹಕ್ಕೆ ಪಾತ್ರರಾದರು.

ಮುಂದೆ ವೆಂಕಟಭಟ್ಟರ ಪುತ್ರರಾದ ಗೋಪಾಲಭಟ್ಟರು ಕೃಷ್ಣಚೈತನ್ಯ ಪಂಥವನ್ನು ಸ್ವೀಕರಿಸಿ ವೃಂದಾವನದ ಪ್ರಸಿದ್ಧರಾದ ಷಡ್ ಗೋಸ್ವಾಮಿಗಳಲ್ಲಿ ಒಬ್ಬರಾಗಿ "ಹರಿಭಕ್ತಿ ವಿಲಾಸ ಮತ್ತು ಭಾಗವತ ಸಂದರ್ಭ" ಎಂಬುವ ಉತ್ತಮ ಗ್ರಂಥಗಳನ್ನು ರಚಿಸಿದರು. ಮುಂದೆ ಚೈತನ್ಯರು ಮಧುರೆ, ಧನುಷ್ಕೋಟಿ, ನವತಿರುಪತಿ, ಆಳ್ವಾರ್ ತಿರುನಗರಿ, ತಿಲಕಂಚಿ, ಶ್ರೀ ವೈಕುಂಠ, ಮಲಯಪರ್ವತ. ಕನ್ಯಾಕುಮಾರಿ ದರ್ಶನ ಪಡೆದರು. ತಿರುವತ್ತಾರಿನ ಆದಿಕೇಶವನನ್ನು ಕಂಡು ಆನಂದದಿಂದ ಗೀತ ಸ್ತುತಿ ನರ್ತನಗಳನ್ನು ಮಾಡಿ ಅಲ್ಲಿ ಬ್ರಹ್ಮಸಂಹಿತೆ ಗ್ರಂಥದ ಪರಿಚಯವನ್ನು ಪಡೆದರು. ತಿರುವನಂತಪುರದ ಪದ್ಮನಾಭಸ್ವಾಮಿಯನ್ನು ಕಂಡ ಶ್ರೀ ಚೈತನ್ಯರು ಮೂರ್ಛಿತರಾದರು. ಮುಂದೆ ಉಡುಪಿಯ ಕೃಷ್ಣನ ದರ್ಶನ ಮುಂದೆ ಶೃಂಗೇರಿಯ ಶಂಕರಾಚಾರ್ಯರ ಪೀಠದರ್ಶನ, ಗೋಕರ್ಣಕ್ಷೇತ್ರ ಸಂದರ್ಶನ, ಮುಂದೆ ಪಂಡರಾಪುರದಲ್ಲಿ ವಿಠಲನ ದರ್ಶನ. ಕೃಷ್ಣವೇಣೀ ನದೀ ತೀರದಲ್ಲಿ ಬಿಲ್ವಮಂಗಳರಿಂದ ರಚಿತವಾದ ಶುದ್ಧ ಪ್ರೇಮದ ಶ್ರೀಕೃಷ್ಣ ಕರ್ಣಾಮೃತ ಗ್ರಂಥದ ಪರಿಚಯ, ಅಧ್ಯಯನ. ಅದರಿಂದ ಪ್ರೇರಿತರಾಗಿ ಕೃಷ್ಣಾನುರಕ್ತಿ, ಕೃಷ್ಣಭಕ್ತಿಯ ಪರಕಾಷ್ಠೆ. ಮುಂದೆ ಚೈತನ್ಯರು ತಪತೀನದಿಯ ಸ್ನಾನ (ಸೂರತ್) ಪಂಪಾ ಸರೋವರ ಪಂಚವಟಿ, ತ್ರಯಂಬಕ, ನಾಸಿಕ, ಬ್ರಹ್ಮಗಿರಿ, ದಂಡಕಾರಣ್ಯಗಳ ಮೂಲಕ ವಿದ್ಯಾ ನಗರವನ್ನು ತಲಪಿದರು. ಇಲ್ಲಿಯೇ ರಾಮಾನಂದರ ರಾಜ್ಯ ಮುಂದೆ ನೀಲಾಚಲ. ಅಳಾಲನಾಥ ಕ್ಷೇತ್ರದಿಂದ ಪುರಿ ಜಗನ್ನಾಥಕ್ಕೆ ಹಿಂತಿರುಗಿದರು. ನೀಲಾಚಲಕ್ಕೆ ಹಿಂತಿರುಗಿದ ಮೇಲೆ ಚೈತನ್ಯರು ತಮ್ಮ ಮಾತೃಭಕ್ತಿಯನ್ನು ತೋರಲು ಎರಡು ಸಲ ವೃದ್ಧ ತಾಯಿಯ ದರ್ಶನ ಪಡೆದು ಆಶೀರ್ವಾದ ಪಡೆದಿದ್ದರು. ತಮ್ಮ ಹೆಂಡತಿಯ ಇಚ್ಛೆಯಂತೆ ಆಕೆಗೂ ಕೃಷ್ಣದೀಕ್ಷೆಯನ್ನು ನೀಡಿದರು. ವಿಷ್ಣುಭಕ್ತರ ಆರಾಧನೆ ಸೇವೆ ಸರ್ವೋತ್ಕೃಷ್ಟವಾದುದೆಂದು ತಿಳಿದ ಚೇತನರು ವೈಷ್ಣವರ ಕೈಂಕರ್ಯವನ್ನು ತಾವೇ ಮಾಡುತ್ತಿದ್ದರು. ಒರಿಸ್ಸಾ ದೇಶದ ಹಾಗೂ ಬಂಗಾಳ ದೇಶದ ಎಲ್ಲರೂ ಕೃಷ್ಣ ಪಂಥವನ್ನು ಅನುಸರಿಸಿ ಶ್ರೀಕೃಷ್ಣ ಚೈತನ್ಯರ ಭಕ್ತರಾದರು. ಪ್ರತಾಪರುದ್ರನ ಸಹಾಯದಿಂದ ಜಗನ್ನಾಥ ದೇವಾಲಯಕ್ಕೆ ಶಿಖರ ಮಂಟಪಗಳನ್ನು ಕಟ್ಟಿಸಿ ಜಗನ್ನಾಥನ ರಥೋತ್ಸವವು ವಿಜೃಂಭಣೆಯಿಂದ ನಡೆಯುವಂತೆ ಏರ್ಪಾಡು ಮಾಡಿದರು. ಆಗ ಜಗನ್ನಾಥನ ಮುಂದೆ ನೃತ್ಯವನ್ನು ಮಾಡುವ ಸಂಪ್ರದಾಯ ತಂದರು.

ಚೈತನ್ಯರು ೪೮ ವರ್ಷಗಳು ಜೀವಿಸಿದ್ದರು. ೨೪ ವರ್ಷ ಗೃಹಸ್ಥಾಶ್ರಮ ಅನಂತರ ೨೪ ವರ್ಷ ಸನ್ಯಾಸಾಶ್ರಮ. ಶ್ರೀ ಚೈತನ್ಯರು ಐದು ವರ್ಷ ಜಗನ್ನಾಥ ದೇವರ ರಥೋತ್ಸವದಲ್ಲಿ ಭಾಗಿಯಾದ ನಂತರ ಪುರಿಯಿಂದ ವಿಜಯದಶಮಿಯಂದು ವೃಂದಾವನಕ್ಕೆ ಹೊರಟರು. ಅವರ ಉದ್ದೇಶ ಮಾತ್ರದರ್ಶನ ಒಂದೇ ಆಗಿತ್ತು. ವೃಂದಾವನಕ್ಕೆ ಹೋಗುವಾಗ ಕೃಷ್ಣ ಪ್ರೇಮದಲ್ಲಿ ಉನ್ಮತ್ತರಾಗಿ ನಾಮ ಸಂಕೀರ್ತನೆಯನ್ನು ಮಾಡುತ್ತ ಅರಣ್ಯದಲ್ಲಿ ಹೋಗುತ್ತಿರುವಾಗ ಕ್ರೂರಜಂತುಗಳೂ ಕೂಡ ದಾರಿಯನ್ನು ಬಿಡುತ್ತಿದ್ದವು. ಚೈತನ್ಯರ ನಾಮಸಂಕೀರ್ತನೆಯನ್ನು ಕೇಳಿದ ಜಿಂಕೆಗಳು ಕುಣಿದಾಡುತ್ತಿದ್ದವು. ಚೈತನ್ಯರಾದರೋ ವೃಂದಾವನದ ಎಲ್ಲಾ ವನಗಳು, ಬೆಟ್ಟಗುಡ್ಡಗಳು, ನದಿ ತರುಲತೆಗಳನ್ನು ಕಂಡು ಹಿಗ್ಗುತ್ತಿದ್ದರು. ಈ ಪ್ರದೇಶವು ಶ್ರೀಕೃಷ್ಣನ, ಚರಣಗಳಿಂದ ಪವಿತ್ರವಾಗಿವೆ. ಅಹೋಭಾಗ್ಯ ಅಹೋಭಾಗ್ಯ ಎಂದು ಕೃಷ್ಣನ ಸ್ಮರಣೆಯಿಂದ ಮೈಮರೆಯುತ್ತಿದ್ದರು. ಶ್ರೀಕೃಷ್ಣನ ಲೀಲೆಗಳನ್ನು ಸ್ಮರಿಸುತ್ತ ಚೈತನ್ಯರು ಪ್ರೇಮದಿಂದ ವಿಹ್ವಲರಾದರು. ಮಧುವನ ಕುಮುದವನ ಬಿಲ್ವವನ ಸಂದರ್ಶಿಸುತ್ತ ಪ್ರೇಮಾಶ್ರುವನ್ನು ಸುರಿಸುತ್ತಿದ್ದರು. ವೃಂದಾವನದ ಬೀದಿಯಲ್ಲಿ ಹೊರಳಾಡುತ್ತಿದ್ದರು. ಗೋಕುಲ ಮಧುರಾ ಕಾಳೀಯ ಕುಂಡಗಳ ರಹಸ್ಯವನ್ನು ಶಿಷ್ಯರಿಗೆ ತಿಳಿಸಿದರು.

ವೃಂದಾವನದಲ್ಲಿ ಇವರ ಪ್ರೇಮೋನ್ಮಾದವನ್ನು ಕಂಡ ಶಿಷ್ಯರು ಇವರನ್ನು ಪ್ರಯಾಗಕ್ಷೇತ್ರಕ್ಕೆ ಕರೆದೊಯ್ದರು. ಅಲ್ಲಿ ಶ್ರೀರೂಪ ಎಂಬುವ ಭಕ್ತರಿಗೆ ಭಕ್ತಿತತ್ವವನ್ನು ಉಪದೇಶಮಾಡಿದರು. ಸೂತ್ರರೂಪದಲ್ಲಿರುವ ಈ ಭಕ್ತಿರಸಾಮೃತಸಿಂಧು ಗ್ರಂಥವು ಪ್ರಸಿದ್ಧವಾಗಿದೆ. ಚೈತನ್ಯರು ಪ್ರಯಾಗದಲ್ಲಿ ಶ್ರೀರೂಪಗೋಸ್ವಾಮಿಗೆ ಉಪದೇಶ ಮಾಡಿದ ಗ್ರಂಥ "ಶ್ರೀರೂಪ ಶಿಕ್ಷೆ" ಎಂದು ಪ್ರಸಿದ್ಧವಾಗಿದೆ. ಶ್ರೀವಿಷ್ಣುವಿನ ಅನಂತ

ಅವತಾರಗಳ ವೈಶಿಷ್ಟವನ್ನು ಚೈತನ್ಯರು ಭಕ್ತರಿಗೆ ನೀಡಿದ್ದಾರೆ. ಚೈತನ್ಯರು ಶ್ರೀಕೃಷ್ಣನ ಲೀಲೆಯನ್ನು ವಿವರಿಸುತ್ತಾ ಗೋಲೋಕಧಾಮ, ವೈಕುಂಠಧಾಮ ಹಾಗೂ ಬ್ರಹ್ಮಾಂಡಗಳ ತತ್ವಗಳನ್ನು ವ್ಯಾಖ್ಯಾನ ಮುಖಾಂತರ ಭಕ್ತರಿಗೆ ತಿಳಿಸಿದರು. ಶ್ರೀಕೃಷ್ಣನ ರೂಪ ಮಾಧುರ್ಯವನ್ನು ಭಕ್ತರಿಗೆ ಎಷ್ಟು ತಿಳಿಸಿದರೂ ಚೈತನ್ಯರಿಗೆ ತೃಪ್ತಿಯಿಲ್ಲ. ಅನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯ ವಿವರ್ಜನಂ ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವೇ ವರಣಂ ತಥಾ ಆತ್ಮನಿಕ್ಷೇಪ ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ ಎಂಬುವುದರ ಶರಣಾಗತಿ ಲಕ್ಷಣವನ್ನು ವಿವರಿಸುತ್ತಾ ಚೈತನ್ಯರು ಕೃಷ್ಣಭಕ್ತಿಗೆ ಅನುಕೂಲವಾದುವುಗಳನ್ನು ಅವಶ್ಯಕವಾಗಿ ಸ್ವೀಕಾರಮಾಡುವ ಸಂಕಲ್ಪ, ಕೃಷ್ಣಭಕ್ತಿಗೆ ಪ್ರತಿಕೂಲವಾದ ವಿಷಯಗಳನ್ನು ತ್ಯಜಿಸುವುದು. ಕೃಷ್ಣನಲ್ಲದೆ ಮತ್ಯಾರೂ ರಕ್ಷಕರಿಲ್ಲವೆಂಬ ದೃಢವಿಶ್ವಾಸ. ಅವನೇ ತನ್ನನ್ನು ರಕ್ಷಿಸುವನೆಂಬ ವಿಶ್ವಾಸ, ಕೃಷ್ಣನಲ್ಲಿ ಶರಣಾಗತಿ ಹೊಂದುವುದು - ಇವೇ ಮುಖ್ಯ ಗುರಿಮಾನವನಿಗೆ ಇರಬೇಕೆಂದು ಪ್ರಚಾರಮಾಡಿದರು. ಮುಂದೆ ಚೈತನ್ಯರು ಕಾಶಿಯಲ್ಲಿ ಪ್ರಸಿದ್ಧರಾಗಿದ್ದ ಮಾಯಾವಾದಿಯಾಗಿದ್ದ ಪ್ರಕಾಶಾನಂದ ಸರಸ್ವತಿಯವರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಚೈತನ್ಯರು ಶ್ರೀಕೃಷ್ಣನ ವಿರಹದಿಂದ ಬಳಲಿ ಕೃಷ್ಣಾ ನಿನ್ನನ್ನು ನಾನು ಯಾವಾಗ ಸೇರಲಿ ಎಂಬುವುದಾಗಿ ಕಣ್ಣೀರಿಡುತ್ತಿದ್ದರು. ಕೃಷ್ಣ ವಿರಹ ವ್ಯಾಕುಲತೆ ದಿನಗಳೆದಂತೆ ತೀವ್ರವಾಯಿತು. ಕ್ರಿಸ್ತ ಶಕ ೧೫೩೩ ನೇ ಇಸವಿ ಒಂದುದಿನ ಭಕ್ತರೆಲ್ಲರೂ ಭಜನೆ ಮಾಡುತ್ತಿರಲು ರಾಮಾನಂದರಾಯರು ಶ್ರೀ ಶಿಕ್ಷಾಷ್ಟಕವನ್ನು ಪಠಿಸುತ್ತಿರಲು ಶ್ರೀಕೃಷ್ಣ ವಿರಹಾನಲು ತೀವ್ರವಾಗಿ ಉದ್ದೀಪ್ತವಾದಂತೆ ಗೋಪೀನಾಥ ದೇವಾಲಯದೊಳಗೆ ಶ್ರೀ ಚೈತನ್ಯರು ವೇಗವಾಗಿ ನುಗ್ಗಿ ದೇವರ ವಿಗ್ರಹದಲ್ಲಿ ಐಕ್ಯವಾಗಿ ಹೋದರು. ಈ ಘಟನೆಯನ್ನು ನರಹರಿಚಕ್ರವರ್ತಿ ರಚಿಸಿರುವ ಭಕ್ತಿ ರತ್ನಾಕರದಲ್ಲಿ ಯಥಾವತ್ತಾಗಿ ಚಿತ್ರಿಸಲಾಗಿದೆ. ಗೋವಿಂದದಾಸರಿಂದ ರಚಿತವಾದ "ಶ್ರೀ ಗೌರ ಕೃಷ್ಣೋದಯಮಹಾಕಾವ್ಯ"ದಲ್ಲಿ ಗೋಪಿಯರೇ ಕೃಷ್ಣನನ್ನು ವೈಕುಂಠಕ್ಕೆ ಕರೆದೊಯ್ದರು ಎಂಬುವ ಉಲ್ಲೇಖವಿದೆ.

## ಚೈತನ್ಯರ ಶಿಕ್ಷಾಷ್ಟಕ :

ಸನಾತನ ಸಂಪ್ರದಾಯಾನುಸಾರ ಶ್ರೀ ಚೈತನ್ಯರು ಪ್ರಚಾರಮಾಡಿದ ಗೌಡೀಯ ವೈಷ್ಣವ ಸಂಪ್ರದಾಯವು ವಿಭಿನ್ನವಾಗಿದೆ. ಇದು ಶ್ರೌತ ಪಥವನ್ನು ಅವಲಂಬಿಸಿದೆ. ಜೀವಾತ್ಮನ ನಿತ್ಯ ಸ್ವರೂಪವು ಶ್ರೀಕೃಷ್ಣ ದಾಸ್ಯವೆಂದು ಅದರ ಸಾಧನವು ಶ್ರೀಕೃಷ್ಣ ಭಕ್ತಿಯೆಂದೂ, ಜೀವಾತ್ಮನ ಪರಮ ಪ್ರಯೋಜನ ಕೃಷ್ಣ ಭಕ್ತಿಯೆಂದೂ, ಜೀವಾತ್ಮನ ಪರಮ ಪ್ರಯೋಜನ ಕೃಷ್ಣ ಪ್ರೇಮವನ್ನು ಹೊಂದುವುದೊಂದೇ ಎಂದು ತಿಳಿಸಿದರು. ಚೈತನ್ಯರ ಉಪದೇಶಾಮೃತ ಅವರ ಸಿದ್ಧಾಂತವನ್ನು ಭಕ್ತಿವಿನೋದ ಠಾಕುರರಿಂದ ರಚಿತವಾದ ದಶಮಾಲ ಶ್ಲೋಕಗಳಲ್ಲಿ ಕಾಣಬಹುದು. ಶ್ರೀಕೃಷ್ಣನಾಮ ಸಂಕೀರ್ತನೆಯನ್ನು ಹೊಗಳುತ್ತಾ ಚೈತನ್ಯರು ತಮ್ಮ ಶ್ರೀ ಶಿಕ್ಷಾಷ್ಟಕದಲ್ಲಿ--

ಚೇತೋ ದರ್ಪಣ ಮಾರ್ಜನಂ
ಭವಮಹಾದಾವಾಗ್ನಿ ನಿರ್ವಾಪಣಂ
ಶ್ರೇಯಃ ಕೈರವ ಚಂದ್ರಿಕಾ
ವಿತರಣಂ ವಿದ್ಯಾವಧೂ ಜೀವನಂ
ಆನಂದಾಂಬುಧಿ ವರ್ಧನಂ ಪ್ರತಿಪದಂ
ಪೂರ್ಣಾಮೃತಾ ಸ್ವಾದನಂ
ಸರ್ವಾತ್ಮಸ್ನಪನಂ ಪರಂ
ವಿಜಯತೇ ಶ್ರೀಕೃಷ್ಣ ಸಂಕೀರ್ತನಂ

(ಶ್ರೀಕೃಷ್ಣ ನಾಮ ಸಂಕೀರ್ತನವು ಸರ್ವತೋಮುಖ ಜಯವನ್ನು ತರಲಿ, ಶ್ರೀಕೃಷ್ಣ ನಾಮ ಸಂಕೀರ್ತನೆಯು - ೧) ಮನಸ್ಸಿನಲ್ಲಿ ಹುದುಗಿದ ಜನ್ಮ ಜನ್ಮಾಂತರಗಳಿಂದ ಬಂದ ಹಲವು ಕಲ್ಮಷಗಳನ್ನು ಹೋಗಲಾಡಿಸುತ್ತದೆ. ೨) ಭವದ ಬೇಗೆಯನ್ನು ಶಮನಗೊಳಿಸುತ್ತದೆ. ೩) ಪಾರಮಾರ್ಥಿಕ ಶ್ರೇಯರೂಪವಾದುದನ್ನು ಪುನರುಜ್ಜೀವಿತಗೊಳಿಸುವುದು. ೪) ವಿದ್ಯಾವಧುವಿನ ಜೀವನಸ್ವರೂಪವಾಗಿರುವುದು. ೫) ಕೃಷ್ಣಾನಂದದ ಸಾಗರವನ್ನು ವರ್ಧಿಸುವುದು. ೬) ಸದಾ ಪೂರ್ಣಾಮೃತಸ್ವಾದನ ನೀಡುವುದು. ೭) ಜೀವನ ಮನೋವಾಕ್ಕು ಶರೀರ ಬುದ್ಧಿಗಳನ್ನು ಆನಂದದಿಂದ ಸ್ನಾನಮಾಡಿಸುತ್ತದೆ.)

ತೃಣಾದಪಿ ಸುನೀಚೇನ
ತರೋರಪಿ ಸಹಿಷ್ಣುನಾ
ಅಮಾನಿನಾ ಮಾನವೇನ
ಕೀರ್ತನೀಯಃ ಸದಾ ಹರಿಃ

(ಯಾರು ತೃಣಕ್ಕಿಂತ ಅಧಿಕ ದೈನ್ಯತೆಯನ್ನೂ ತರುವಿಗಿಂತ ಅಧಿಕವಾದ ಸಹಿಷ್ಣುತೆಯನ್ನು ಹೊಂದಿ ತನ್ನ ಮಾನವನ್ನು ಚಿಂತಿಸದೆ ಪರರ ಮಾನಕ್ಕೆ ಆದ್ಯತೆ ನೀಡುವರೋ ಅಂತಹ ಭಕ್ತರೇ ಹರಿಕೀರ್ತನೆಗೆ ಯೋಗ್ಯರು.)

ನ ಧನಂ ನ ಜನಂ ನ ಸುಂದರೀಂ
ಕವಿತಾಂ ವಾ ಜಗದೀಶಕಾಮಯೇ
ಮಮ ಜನ್ಮನಿ ಜನ್ಮನೀಶ್ವರೇ
ಭವತಾತ್ ಭಕ್ತಿರಹೈತುಕೀತ್ವಯಿ

(ಹೇ ಜಗದೀಶ್ವರನಾದ ಶ್ರೀಕೃಷ್ಣನೇ ಅಖಿಲ ಐಶ್ವರ್ಯವನ್ನೂ ಬಂಧು ಬಾಂಧವರನ್ನೂ ಸುಂದರವಾದ ಕವಿತಾ ಶಕ್ತಿಯನ್ನೂ ನಾನು ನಿನ್ನಲ್ಲಿ ಬೇಡುವುದಿಲ್ಲ. ನನಗೆ ಜನ್ಮ ಜನ್ಮಾಂತರಗಳಲ್ಲಿ ನಿನ್ನ ಚರಣಕಮಲಗಳಲ್ಲಿ ಅಹೈತುಕೀ ಭಕ್ತಿಯು - ನಿರ್ವ್ಯಾಜ ಪ್ರೇಮವು ಉಂಟಾಗಲಿ.)

ಅಯಿ ನಂದತನು ಕಿಂಕರಂ
ಪತಿತಂ ಮಾಂ ವಿಷಮೇ ಭವಾಂಬುಧೌ
ಕೃಪಯಾ ತವ ಪಾದ ಪಂಕಜಸ್ಥಿತ
ಧೂಲೀಸದೃಶಂ ವಿಚಿಂತಯ

(ಹೇ ನಂದನಂದ ಗೋವಿಂದ, ನಿನ್ನ ನಿತ್ಯ ಕಿಂಕರನಾದ ನಾನು ವಿಷಮವಾದ ಈ ಭವಸಾಗರದಲ್ಲಿ ಪತಿತನಾಗಿ ಸಂಕಟದಲ್ಲಿರುವೆ. ದೀನನಾದ ನನ್ನನ್ನು ಕೃಪೆಯಿಂದ ಉದ್ಧರಿಸಿ ನಿನ್ನ ಪಾದಧೂಳಿಯಾಗಿ ನನ್ನನ್ನು ಸ್ವೀಕರಿಸು.)

ನಯನಂ ಗಲದಶ್ರುಧಾರಯಾ
ವದನಂ ಗದ್ಗದರುದ್ಧಯಾಗಿರಾ
ಪುಲಕೈರ್ನಿಚಿತಂ ವಪುಃ ಕದಾ
ತವ ನಾಮಗ್ರಹಣೇ ಭವಿಷ್ಯತಿ

(ಓ ಪ್ರಭುವೇ ನಿನ್ನ ನಾಮ ಸಂಕೀರ್ತನೆಯಿಂದ ಯಾವಾಗ ನನ್ನ ಕಣ್ಣುಗಳು ಅಶ್ರು ಪೂರಿತವಾಗುತ್ತವೋ, ಬಾಯಿ ನಿನ್ನ ನಾಮದ ಉಚ್ಚಾರಣೆಯಿಂದ ಗದ್ಗದ ಸ್ವರಯುಕ್ತವಾಗುತ್ತೋ ನನ್ನ ಸಮಸ್ತ ಶರೀರವು ರೋಮಾಂಚಿತಗೊಂಡು ನಿನ್ನ ನಾಮಾಸಂದದ ಸವಿ ಎಂದು ಅನುಭವಿಸುವನೋ.)

ಯುಗಾಯಿತಂ ನಿಮಿಷೇಣ
ಚಕ್ಷುಷಾ ಪ್ರಾವೃಷಾಯಿತಮ್
ಶೂನ್ಯಾಯಿತಂ ಜಗತ್‌ಸರ್ವಂ
ಗೋವಿಂದ ವಿರಹೇಣ ಮೇ

(ಗೋವಿಂದನ ವಿರಹದಿಂದ ಒಂದೊಂದು ನಿಮಿಷವೂ ಯುಗಗಳಂತೆ ಭಾಸವಾಗುತ್ತಿದೆ. ಚಕ್ಷುಗಳು ವರ್ಷಾಕಾಲದ ಮೇಘಗಳಂತೆ ದೋ ಎಂದು ಅಶ್ರುಧಾರೆಯನ್ನು ಸುರಿಸುತ್ತಿದೆ. ಗೋವಿಂದನ ವಿರಹದಿಂದ ಈ ಸರ್ವಜಗತ್ತು ಶೂನ್ಯವಾಗಿ ಕಾಣುತ್ತಿದೆ.)

ಶ್ರೀಕೃಷ್ಣ ಚೈತನ್ಯರು ಹಾಡಿದ ಶಿಕ್ಷಾಷ್ಟಕ ಶ್ರೀಮದ್ ಭಾಗವತದ ಸಾರಸರ್ವಸ್ವವಾಗಿದೆ. ಶ್ರೀಕೃಷ್ಣ ಚೈತನ್ಯರ ಶಿಷ್ಯವರ್ಗದಲ್ಲಿ ಪ್ರಮುಖರು ಗಯಾಕ್ಷೇತ್ರದ ಶ್ರೀ ಅದ್ವೈತಾಚಾರ್ಯರು. ನವದ್ವೀಪದ ಶ್ರೀ ಶ್ರೀನಿವಾಸ ಪಂಡಿತರು. ಶ್ರೀ ಗದಾಧರ ಪಂಡಿತರು. ಶ್ರೀ ಹರಿದಾಸಠಾಕೂರರು, ಶ್ರೀ ಜಗದಾನಂದ ಪಂಡಿ

## ಸಪ್ತಗಿರಿ ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ—೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

ತರು. ಶ್ರೀ ಸ್ವರೂಪ ದಾಮೋದರ ಗೋಸ್ವಾಮಿಗಳು: ಒರಿಸ್ಸಾದೇಶದ ಪ್ರಸಿದ್ಧ ರಾಜನಾದ ಪ್ರತಾಪ ರುದ್ರ ಗಜಪತಿಯ ಸಾಮಂತರಾಜ ಶ್ರೀರಾಮಾನಂದರಾಯರು, ಶ್ರೀ ರೂಪಗೋಸ್ವಾಮಿ, ಶ್ರೀ ಸನಾತನ ಗೋಸ್ವಾಮಿ, ಶ್ರೀ ರಘುನಾಥದಾಸಗೋಸ್ವಾಮಿ, ಶ್ರೀ ಗೋಪಾಲ ಭಟ್ಟ ಗೋಸ್ವಾಮಿ, ಶ್ರೀ ಜೀವಗೋಸ್ವಾಮಿ. ಈ ಶಿಷ್ಯರೆಲ್ಲರೂ ಮಹಾ ವಿದ್ವಾಂಸರು, ಜ್ಞಾನಿಗಳು, ಶ್ರೀಕೃಷ್ಣ ಚೈತನ್ಯರಬಗ್ಗೆ ಅನೇಕ ಉತ್ತಮ ಗ್ರಂಥಗಳನ್ನು ಬರೆದು ನಮಗೆ ಉಪಕಾರಮಾಡಿದ್ದಾರೆ.

ಮುಖ್ಯವಾಗಿ ಶ್ರೀ ಚೈತನ್ಯರ ದಿವ್ಯಚರಿತೆಯನ್ನು ತಿಳಿಯದೇಕಾದರೆ ಈ ಕೆಳಗಿನ ಗ್ರಂಥಗಳು ಸಹಕಾರಿಯಾಗುತ್ತವೆ.

೧. ಶ್ರೀಲ ಕೃಷ್ಣದಾಸ ಕವಿರಾಜಗೋಸ್ವಾಮಿಗಳ ಶ್ರೀ ಚೈತನ್ಯ ಚರಿತಾಮೃತ.

೨. ಶ್ರೀ ವೃಂದಾವನದಾಸ ಠಾಕೂರರ ಶ್ರೀ ಚೈತನ್ಯ ಭಾಗವತ.

೩. ಶ್ರೀಲ ಭಕ್ತಿವಿನೋದ ಠಾಕೂರರ ಅಮೃತ ಪ್ರವಾಹ ಭಾಷ್ಯ

೪. ಶ್ರೀಲ ಭಕ್ತಿವಿನೋದ ಠಾಕೂರರ ಜೈವ ಧರ್ಮ.

೫. ಶ್ರೀಲ ಭಕ್ತಿವಿನೋದ ಠಾಕೂರರ ಶ್ರೀ ಚೈತನ್ಯ ಶಿಕ್ಷಾಮೃತ.

೬. ಶ್ರೀಲ ಭಕ್ತಿವಿನೋದ ಠಾಕೂರರ ಶ್ರೀ ತತ್ವ ಸೂತ್ರ.

೭. ಶ್ರೀಮದ್ಭಾಗವತಾರ್ಕ ಮರೀಚಿಮಾಲಾ.

೮. ಶ್ರೀ ಜೀವಗೋಸ್ವಾಮಿಗಳ ಭಾಗವತ ಸಂದರ್ಭ.

೯. ಶ್ರೀ ಜೀವಗೋಸ್ವಾಮಿಗಳ ಶ್ರೀಹರಿನಾಮಾಮೃತ ವ್ಯಾಕರಣ.

೧೦. ಕನ್ನಡದಲ್ಲಿ ಶ್ರೀ ನರಸಿಂಹ ಬ್ರಹ್ಮಚಾರಿಯವರ ಶ್ರೀ ಚೈತನ್ಯಲೀಲಾಮೃತ.

೧೧. Bhavan's Publications Sri Gouranga.

೧೨. ಹಿಂದಿಯಲ್ಲಿ ಸ್ವಾಮಿ ಪ್ರಭುದತ್ತ ಬ್ರಹ್ಮಚಾರಿಯವರು ಬರೆದ ೫ ಸಂಪುಟಗಳ ಶ್ರೀ ಚೈತನ್ಯ ಚರಿತಾವಳೀ, ಗೀತಾಪ್ರೆಸ್ ಗೋರಖ್‌ಪುರ ಅವರಿಂದ ಪ್ರಕಟಿತವಾದ ಗ್ರಂಥಗಳು ಅದ್ಭುತವಾದವು ಈ ಗ್ರಂಥದಲ್ಲಿ ಆಧಾರಗ್ರಂಥಗಳನ್ನು ಹೇಳುವಾಗ ಚೈತನ್ಯರ ಬಗ್ಗೆ ಸಂಸ್ಕೃತದಲ್ಲಿ ೨೪ ಗ್ರಂಥಗಳು ಬಂಗಾಳದಲ್ಲಿ ೧೪ ಗ್ರಂಥಗಳೂ, ಇಂಗ್ಲೀಷ್‌ನಲ್ಲಿ ೬ ಗ್ರಂಥಗಳೂ ಹಾಗೂ ಗುಜರಾತಿಯಲ್ಲಿ ಪ್ರೇಮಾವತಾರ ಚೈತನ್ಯದೇವ ಎಂಬುವ ಗ್ರಂಥಗಳನ್ನೂ ಅಧ್ಯಯನ ಮಾಡಿ ಅವುಗಳಿಂದ ಉಪಕೃತರಾಗಿದ್ದೇನೆಂದು ಪ್ರಭುದತ್ತ ಬ್ರಹ್ಮಚಾರಿಯವರು ತಿಳಿಸಿರುತ್ತಾರೆ. ಶ್ರೀಕೃಷ್ಣ ಪ್ರೇಮಿ ಮಹಾರಾಜ್‌ರವರಿಂದ ರಚಿತವಾದ ಶ್ರೀ ವೈಷ್ಣವ ಸಂಗೀತಾ ಸಂಪುಟ ೨ (ಸಂಸ್ಕೃತ) ಸುಮಾರು ೨೧೬ ಪುಟಗಳ ಶ್ರೀ ಚೈತನ್ಯ ಪ್ರಭುಗಳ ಚರಿತಾವಳಿ ಬಹಳ ಸುಂದರವಾಗಿದೆ. ಅವರು ಕೃಷ್ಣ ಭಕ್ತಿಯನ್ನು ವಿವರಿಸುತ್ತಾ--

ಕೃಷ್ಣಭಕ್ತಿಂ ವಿನಾ ನೃಣಾಂ
ವೃಥಾ ಶಾಸ್ತ್ರಾರ್ಥ ಚಿಂತನಂ
ಯಥೈವ ನೇತ್ರಹೀನಾನಾಂ
ದರ್ಪಣಾ ಲೋಕನಂ ಯಥಾ

ಇಂತಹ ಕೃಷ್ಣಭಕ್ತಿಯನ್ನು ಸಾರಿದ ಗೌರಾಂಗರಿಗೆ ನಮೋನಮಃ

☆☆☆☆☆☆☆☆☆

## ಪ್ರಕಟನೆ :

ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

**ತಿ. ತಿ. ದೇ.**

# ವೇದಗಳು

---ಡಾ|| ಎಸ್. ಕೇಶವಮೂರ್ತಿ.

ಭಾರತೀಯ ಸಂಸ್ಕೃತಿಯಲ್ಲಿ ವೇದಗಳಿಗೆ ಗೌರವಪೂರ್ಣ ಸ್ಥಾನವಿದೆ. ಸ್ಮರಣೆಯ ಆಧಾರಶಿಲೆಯ ಮೇಲೆ ಭಾರತೀಯ ಧರ್ಮ, ಸಭ್ಯತೆಯ ವಿಶಾಲ ಭವನಗಳು ನಿಲ್ಲಿಸಲ್ಪಟ್ಟಿವೆ. ಹಿಂದೂ ಧರ್ಮದ ಆಚಾರವಿಚಾರ, ಧರ್ಮ, ಕರ್ಮ, ಜನಜೀವನ - ಇವುಗಳನ್ನು ಅರಿತುಕೊಳ್ಳುವುದಕ್ಕೆ ವೇದಗಳ ಅಧ್ಯಯನ ಅತ್ಯಂತ ಅವಶ್ಯಕ. ಪ್ರತಿಭೆಯುಳ್ಳ ಋಷಿಮುನಿಗಳು ತಮ್ಮ ಪ್ರತಿಭಾಚಕ್ಷುಗಳ ಸಹಾಯದಿಂದ ಸಾಕ್ಷಾತ್ಕಾರ ಮಾಡಿಕೊಂಡ ಆಧ್ಯಾತ್ಮಶಾಸ್ತ್ರ ಮತ್ತು ತತ್ವಗಳ ವಿಶಾಲವಾದ ರಾಶಿಯೇ ವೇದಗಳು. ಇವುಗಳು ಮಂತ್ರರೂಪದಲ್ಲಿವೆ. ಮನು ಹೇಳಿರುವಂತೆ "ವೇದಗಳು - ಪಿತೃಗಣಗಳು ದೇವತೆಗಳು, ಮನುಷ್ಯರ ಸನಾತನ ಧರ್ಮದ ಕಣ್ಣುಗಳಾಗಿವೆ". ಲೌಕಿಕ ವಸ್ತುಗಳನ್ನು ನೋಡುವುದಕ್ಕೆ ಕಣ್ಣುಗಳು ಎಷ್ಟು ಮುಖ್ಯವೋ ಅದರ ಹಾಗೆ ಅಲೌಕಿಕ ತತ್ವಗಳನ್ನು ದರ್ಶಿಸಲು ವೇದವೆಂಬ ಚಕ್ಷುಗಳು ಬೇಕು.

ಇಷ್ಟಾರ್ಥ ಸಿದ್ಧಿಗೆ ಅನಿಷ್ಟಾರ್ಥ ನಿವಾರಣೆಗೆ ಅಲೌಕಿಕ ಉಪಾಯವನ್ನು ಕೊಡುವ ಗ್ರಂಥಗಳೆಂದರೆ ವೇದಗಳು. ವೇದಗಳ ವೇದತ್ವ ಇದರಲ್ಲೇ ಅಡಗಿದೆ. ಪ್ರತ್ಯಕ್ಷ ಅನುಮಾನದ ಮೂಲಕ ಅರಿಯಲಾಗದ, ಪ್ರಜ್ಞೆಗೆ ಸಿಲುಕದ ಜ್ಞಾನವನ್ನು ಇದು ನಮಗೆ ಕೊಡುತ್ತದೆ. ಭಾರತದಲ್ಲಿರುವ ಧರ್ಮಗಳು ಮತ್ತು ದರ್ಶನಗಳು ತತ್ವಚಿಂತನೆಗಳು ಈ ವೇದಗಳ ಆಧಾರದ ಮೇಲೆ ನಿಂತಿವೆ.

ವೇದಗಳನ್ನು ಅಪೌರುಷೇಯ ಎಂದು ಹೇಳುತ್ತಾರೆ. ಅಂದರೆ ಮನುಷ್ಯರಿಂದ ರಚಿತವಾದುದಲ್ಲ, ದೇವತೆಗಳಿಂದ ಹೇಳಲ್ಪಟ್ಟಿದ್ದು, ಈ ಮಂತ್ರವನ್ನು ದೇವವಾಣಿಯೆಂದು ಹೇಳುತ್ತಾರೆ. ವೇದ ಮಂತ್ರಗಳನ್ನು ಯಾರೂ ರಚಿಸಿಲ್ಲ, ಬ್ರಹ್ಮನ ಚತುರ್ಮುಖದಿಂದ ಹುಟ್ಟಿವೆ. ಆದರೆ ಋಷಿಗಳು ವೇದ ಮಂತ್ರಗಳನ್ನು ಕಣ್ಣಿಂದ ನೋಡಿದ್ದಾರೆ. ಇದರ ವಿಷಯ ಗೂಢವಾದುದು, ಮನಸ್ಸಿನಲ್ಲಿ ಮನನ ಮಾಡತಕ್ಕದ್ದು, ಪ್ರಮಾಣವಾಗಿ ಬಳಸಬಹುದಾಗಿದ್ದು, ನಾಸ್ತಿಕರು, ಚರ್ವಾಕರು, ಜೈನರು, ಬೌದ್ಧರು, ವೇದಗಳನ್ನು ಪ್ರಮಾಣವಾಗಿ ಸ್ವೀಕರಿಸುವುದಿಲ್ಲ. ಆದರೆ ಹಿಂದೂಗಳಿಗೆ ಇದು ಪ್ರಮಾಣವಾಕ್ಯವಾಗಿದೆ. ಆದುದರಿಂದ ವೇದಗಳನ್ನು ಅಪೌರುಷೇಯ ಎಂದೇ ಹೇಳುತ್ತಾರೆ. ಪರಬ್ರಹ್ಮನ ಬಾಯಿಂದ ಇವುಗಳು ನಿಸ್ಸೃತವಾದವು ಅದರ ಪ್ರತ್ಯಕ್ಷದರ್ಶನ ಮಾಡಿ ಋಷಿಗಳು ಇದನ್ನು ನಮಗೆ ಕೊಟ್ಟಿರುವರು ಎಂದು ಹೇಳುತ್ತಾರೆ. ವೇದಗಳಲ್ಲಿ ವಿಜ್ಞಾನವಿದೆ.

ವೇದಗಳಲ್ಲಿ ಆತ್ಮ ಜೀವಾತ್ಮ ಮತ್ತು ಜಗತ್ತು ಇವುಗಳ ನಿರೂಪಣೆ ಮತ್ತೆ ಇವುಗಳ ಮಧ್ಯೆ ಇರುವ ಸಂಬಂಧ ನಿರೂಪಿಸಲಾಗಿದೆ. ಹಿಂದೂ ಧರ್ಮಕ್ಕೆ, ವಿಶ್ವಧರ್ಮಕ್ಕೆ ಆಧಾರಭೂತವಾದ ಜ್ಞಾನ ಇದರಲ್ಲಿ ಅಡಕವಾಗಿದೆ. ಈ ವೇದಗಳು ಸಾವಿರಾರು ವರ್ಷಗಳ ಹಿಂದೆ ನಮಗೆ ಕೊಡಲ್ಪಟ್ಟಿತು ಎಂದು ಋಷಿಗಳು ಹೇಳಿದ್ದಾರೆ. ಹಿಂದಿನ ಕಾಲದಲ್ಲಿ ಮುದ್ರಣ ಯಂತ್ರ ಇರಲಿಲ್ಲ, ಬರೆಯುವ ಸಾಧನಗಳಿರಲಿಲ್ಲ, ಇದು ಬಾಯಿಪಾಠದ ಮೂಲಕ ಒಬ್ಬರಿಂದ ಒಬ್ಬರಿಗೆ ಹೇಳಲ್ಪಟ್ಟಿತು. ಕೇಳಿ ಅದನ್ನು ಮನನ ಮಾಡಿದ ಕಾರಣ ಇವುಗಳನ್ನು ಶ್ರುತಿಗಳು ಎಂದು ಹೇಳುತ್ತಾರೆ. ಶ್ರುತಿಗಳು ಎಂದರೆ ಕೇಳಲ್ಪಟ್ಟಿದ್ದು ಎಂದರ್ಥ. ಸುದೀರ್ಘಕಾಲದಿಂದ ವೇದಗಳು ಬಾಯಿಪಾಠದ ಮೂಲಕ ನಮ್ಮನ್ನು ತಲುಪಿವೆ. ಅದರ ಒಂದು ಅಕ್ಷರವೂ ಸ್ಖಲಿತವಾಗಿಲ್ಲ, ಚ್ಯುತವಾಗಿಲ್ಲ, ಇಂದು ವೇದ ಪಾಠಗಳನ್ನು ಸಸ್ವರ ಉಚ್ಚಾರಣೆಯ ಮೂಲಕ ವಿಶುದ್ಧರೂಪದಲ್ಲೇ ಕೇಳಬಹುದು. ಪ್ರಾಚೀನ ಯುಗದಲ್ಲಿ ಉಚ್ಚರಿಸಿದ ಹಾಗೆ ಇಂದೂ ಇದನ್ನು ಉಚ್ಚರಿಸುತ್ತಾರೆ. ಉಚ್ಚಾರಣೆಯ ಭೇದವನ್ನು ತಡೆಗಟ್ಟಲು ಅಷ್ಟವಿಕೃತಿಗಳ ವ್ಯವಸ್ಥೆಯನ್ನು ಮಹರ್ಷಿಗಳು ಮಾಡಿಟ್ಟಿದ್ದಾರೆ. ಈ ವಿಕೃತಿಗಳ ದಯೆಯಿಂದ ವೇದಗಳ ಪದಕ್ರಮೋಚ್ಚಾರಣ, ವಿಲೋಮ, ಅನುಲೋಮ ಇವುಗಳು ಅನೇಕ ಬಾರಿ ಬಂದು ಅದರ ಸ್ವರೂಪ ಜ್ಞಾನದಲ್ಲಿ ತೃಟಿಬಾರದಂತೆ ಸುರಕ್ಷಿತವಾಗಿ ನಮಗೆ ಕೊಟ್ಟಿದ್ದಾರೆ, ಜಟಾಪಾಠ, ಮಾಲಾಪಾಠ, ಶಿಖಾಪಾಠ, ರೇಖಾಪಾಠ, ಧ್ವಜಪಾಠ, ದಂಡಪಾಠ, ರಥಪಾಠ, ಘನಪಾಠ, ಮುಂತಾದವುಗಳ ಮೂಲಕ ಸುರಕ್ಷಿತವಾಗಿ ಇಟ್ಟಿದ್ದಾರೆ.



ಮಂತ್ರಗಳಿಗೆ ನಿಯತವಾಗಿರುವ ಪಾಠ ಸಂಹಿತಾಪಾಠ, ಈ ಪಾಠದ ಪ್ರತಿಯೊಂದು ಪದವನ್ನು ವಿಚ್ಛೇದ ಮಾಡಿದಾಗ ಅದು ಪದಪಾಠವಾಗುತ್ತದೆ. ಪದಪಾಠದಲ್ಲಿ ಪದಗಳು ಅವೇ ಆದರೂ ಸ್ವರಗಳಲ್ಲಿ ಸಾಕಷ್ಟು ಅಂತರವಿರುತ್ತದೆ. ಕ್ರಮಬದ್ಧವಾಗಿ ೨ ಪದಗಳ ಪಾಠಕ್ರಮ ಪದ ಪಾಠವೆಂದು ಕರೆಯಲ್ಪಡುತ್ತದೆ. ಅನುಲೋಮ ಮತ್ತು ವಿಲೋಮದ ಕ್ರಮದಿಂದ ೩ ಬಾರಿ ಪಠನಮಾಡಿದರೆ ಅದನ್ನು ಜಟಾಪಾಠ ಎಂದು ಹೇಳುತ್ತಾರೆ. ಜಟಾಪಾಠದ ಜೊತೆ ಮುಂದೆ ಬರುವ ಒಂದು ಪದ ಸೇರಿಸಿಬಿಟ್ಟರೆ ಶಿಖಾಪಾಠವಾಗುತ್ತದೆ. ಈ ಎಲ್ಲಕ್ಕಿಂತ ವಿಲಕ್ಷಣವಾದುದು ಮತ್ತು ಕಠಿಣವಾದುದು ಘನಪಾಠ. ಇದರಲ್ಲಿ ಪದಗಳನ್ನು ಅನುಲೋಮ ವಿಲೋಮ ಕ್ರಮದಲ್ಲಿ ಅನೇಕ ಬಾರಿ ಆವೃತ್ತಿ ಮಾಡುತ್ತಾರೆ. ಈ ಘನಪಾಠದಲ್ಲಿ ೪ ಭಾಗಗಳಿವೆ. ಒಂದರಲ್ಲಿ ಶಿಖಾಪಾಠದ ನಂತರ ಪದಗಳ ವಿಪರ್ಯಾಸ ಮತ್ತು ಪುನಃ ಪಾಠಮಾಡಲ್ಪಡುತ್ತದೆ. ಒಂದು ಮಂತ್ರದ ಅರ್ಥ ಋಚಾವನ್ನು ಬೇರೆ ಬೇರೆ ಪಾಠಗಳಲ್ಲಿ ಕ್ರಮಬದ್ಧವಾಗಿ ಹೀಗೆ ಮಾಡಬಹುದು. ಋಕ್‌ಪ್ರಾತಿಶಾಖ್ಯದಲ್ಲಿ ಈ ಕ್ರಮ ವಿಧಾನಗಳ ವರ್ಣನೆಯು ಬಹಳ ಸೊಗಸಾಗಿ ಅನೇಕ ನಿಯಮಗಳನ್ನು ಉದ್ಧರಿಸಿಕೊಡಲ್ಪಟ್ಟಿದೆ. ಇವುಗಳನ್ನು ಸಾಮವೇದದಲ್ಲಿ ವಿಸ್ತಾರವಾಗಿ ಹಾಡುವುದಕ್ಕೆ ಪ್ರಯೋಗಿಸುತ್ತಾರೆ. ಹೀಗೆ ವೇದಗಳನ್ನು ಸುರಕ್ಷಿತವಾಗಿ ಇಡುವ ಕ್ರಮಗಳನ್ನು ಮಾಡಿದ್ದಾರೆ.

ವೇದ ಶಬ್ದವು ವಿದ್ ಧಾತುವಿನಿಂದ ಬಂದಿದೆ. ಅದರ ಅರ್ಥ ಜ್ಞಾನ. ಪರಮಾತ್ಮನ ಜ್ಞಾನವೇ ವೇದ. ವೇದದ ಪ್ರತಿಯೊಂದು ಮಂತ್ರದ ಶಬ್ದ ಕ್ರಮವು ನಿತ್ಯವಾದುದು, ಆದರೆ ಒಂದು ಮಂತ್ರ ಆದ ಮೇಲೆ ಮತ್ತೊಂದು ಮಂತ್ರ ಬರುವ ಕ್ರಮ ನಿತ್ಯವಲ್ಲ, ಪರಿವರ್ತನೆಗೆ ಒಳಗಾಗಿದ್ದು, ವೇದಗಳು

ಒಂದೇ. ದ್ವಾಪರಯುಗದ ಅಂತ್ಯದಲ್ಲಿ ಕೃಷ್ಣದ್ವೈಪಾಯನ ವ್ಯಾಸ ಋಷಿಗಳು ವೇದಗಳ ಉಪಯೋಗಕ್ಕನುಸಾರವಾಗಿ ವೇದಗಳನ್ನು ೪ ಭಾಗಗಳನ್ನಾಗಿ ಮಾಡಿದರು. ಅವುಗಳು ೧. ಋಗ್ವೇದ, ೨. ಯಜುರ್ವೇದ, ೩. ಸಾಮವೇದ ಮತ್ತು ೪. ಅಥರ್ವವೇದ. ಇವುಗಳನ್ನು ೪ ಸಂಹಿತೆಗಳು ಎಂದು ಹೇಳುತ್ತಾರೆ. ತಮ್ಮ ೪ ಜನ ಶಿಷ್ಯರನ್ನು ಕರೆದು ಒಬ್ಬೊಬ್ಬರಿಗೂ ಒಂದೊಂದು ಸಂಹಿತೆಯನ್ನು ಹೇಳಿಕೊಟ್ಟರೆಂದು ಹೇಳಲ್ಪಡುತ್ತದೆ.

ವ್ಯಾಸ ಎಂದರೆ ವಿಸ್ತಾರ, ವೇದಗಳನ್ನು ವಿಸ್ತಾರವಾಗಿ ವಿಂಗಡಿಸಿ ೪ ಭಾಗಗಳಾಗಿ ಮಾಡಿದುದರಿಂದ ಅವರ ಹೆಸರು ವ್ಯಾಸರು ಎಂದು ಆಯಿತು. ಅವರ ಮೈಬಣ್ಣ, ಶ್ಯಾಮಬಣ್ಣ, ಆದುದರಿಂದ ಕೃಷ್ಣ ಎಂದು ಅವರ ಹೆಸರ ಜೊತೆ ಸೇರಿತು. ಅವರು ಹುಟ್ಟಿದ್ದು ಯಮುನೆಯ ಮಧ್ಯಭಾಗದಲ್ಲಿನ ದ್ವೀಪದಲ್ಲಿ. ಆದ್ದರಿಂದ ಅವರಿಗೆ ದ್ವೈಪಾಯನ ಎಂದು ಹೆಸರಾಯಿತು. ಇವರು ಮಹಾಋಷಿಗಳು, ವೇದಗಳನ್ನು ಪುರಾಣಗಳನ್ನು ವೇದಾಂಗಗಳನ್ನು ಉಪನಿಷತ್ತುಗಳನ್ನು, ಇತಿಹಾಸವನ್ನು, ಬೇರೆ ಬೇರೆ ಬರೆದು ಸಂಗ್ರಹ ಮಾಡಿದ ಕಾರಣ ಇವರನ್ನು ಮಹರ್ಷಿ ಎಂದು ಕರೆಯುತ್ತಾರೆ. ಹೀಗೆ ಇವರ ಹೆಸರು ಮಹರ್ಷಿ ಕೃಷ್ಣ ದ್ವೈಪಾಯನ ವ್ಯಾಸರು ಎಂದಾಯಿತು.

ಪೈಲನಿಗೆ ಋಗ್ವೇದವನ್ನು, ವೈಶಂಪಾಯನನಿಗೆ ಯಜುರ್ವೇದವನ್ನು ಜೈಮಿನಿಗೆ ಸಾಮವೇದವನ್ನು ಸುಮಂತನಿಗೆ ಅಥರ್ವವೇದವನ್ನು ಹೇಳಿಕೊಟ್ಟರು. ವೇದಗಳು ಶ್ರುತಿಮೂಲಕ ಕಲಿತಿದ್ದರಿಂದ ಋಷಿಗಳು ತಮ್ಮ ಪುತ್ರರಿಗೂ, ಮೇಧಾವಿ ಶಿಷ್ಯರಿಗೂ ಹೇಳಿಕೊಟ್ಟರು. ಹೀಗೆ ಒಂದೇ ವೇದ ೪ ವೇದಗಳಾಗಿ ಆದವು. ಯಜ್ಞ ಮತ್ತು ಮಂತ್ರಗಳ ಉಪಯೋಗವನ್ನು ಗಮನದಲ್ಲಿಟ್ಟು ವಿಭಜನೆ ಮಾಡಿದ್ದರು. ಯಜ್ಞಕ್ಕೆ ೪ ಜನ ಮುಖ್ಯಕರ್ತಾರರು ಇರುತ್ತಾರೆ. ೧. ಹೋತಾ, ೨. ಅಧ್ವರ್ಯು, ೩. ಉದ್ಗಾತೃ, ೪. ಬ್ರಹ್ಮಾ. ಈ ೪ ಜನರು ಕ್ರಮಶಃ ಋಕ್, ಯಜುರ್, ಸಾಮ ಮತ್ತು ಅಥರ್ವಗಳ ಅಧಿಕಾರಿಗಳೆಂದು ಭಾವಿಸುತ್ತಾರೆ. ಇದರಲ್ಲಿ ಬ್ರಹ್ಮಮಿಕ್ಕಿರುವ ೩ ಜನರನ್ನು ನಿರೀಕ್ಷಿಸುವ ಅಧಿಕಾರ ಹೊಂದಿದ್ದಾರೆ. ಈ ಮಂತ್ರಗಳು ಇಬ್ಬರು, ಮೂವರು ಅಥವಾ ನಾಲ್ಕು ಜನ ಉಪಯೋಗಿಸುವಾಗ ಹೇಳುವ ರೀತಿಯನ್ನು ಸಂಬಂಧಗಳನ್ನು ವೇದಗಳಲ್ಲಿ ಹೇಳಿದೆ. ಹೀಗೆ ಸಾಮವೇದದ ಅನೇಕ ಮಂತ್ರಗಳು ಋಗ್ವೇದದಲ್ಲೂ ಅಥರ್ವವೇದದಲ್ಲೂ ಕಂಡುಬರುವುದು ಸಹಜ. ಮಂತ್ರಗಳ ಜೊತೆ ಋಷಿಗಳು, ದೇವತೆಗಳು, ಛಂದಸ್ಸುಗಳ ಉಚ್ಚಾರಣೆ ಮಾಡಲ್ಪಡುತ್ತದೆ.

ಛಂದಸ್ಸು : ಮಂತ್ರಗಳಲ್ಲಿ ಎಷ್ಟು ಅಕ್ಷರಗಳಿವೆ ಎಂಬುದನ್ನು ಗಣಿಸಿ ಛಂದಸ್ ಶಾಸ್ತ್ರದ ಪ್ರಕಾರ ಅದರ ಹೆಸರು, ವರ್ಗೀಕರಣ, ಛಂದಸ್ಸಿನ ಹೆಸರು, ಕೊಟ್ಟಿರುತ್ತಾರೆ. ಛಂದಸ್ಸು ಇದರ ಜ್ಞಾನ, ಛಂದಸ್ಸನ್ನು ಹೇಳಿದಕೂಡಲೇ ಗೊತ್ತಾಗುತ್ತದೆ.

ಋಷಿ : ವೇದ ಮಂತ್ರಗಳ ಸಂಪೂರ್ಣ ಅರ್ಥ ನಿರುಕ್ತದ ಮೂಲಕ ಆಗುವುದಿಲ್ಲ. ಮಂತ್ರದ ಅರ್ಥದ ದರ್ಶನ ಅಥವಾ ಜ್ಞಾನವನ್ನು ಋಷಿಗಳು ಸಮಾಧಿಯ ಸ್ಥಿತಿಯಲ್ಲಿ ಕಂಡು ಅರಿತಿದ್ದರು. ಅವರನ್ನು ಆ ಮಂತ್ರದ ಋಷಿಗಳೆಂದು ಕರೆಯುತ್ತಾರೆ.

ದೇವತಾ : ಮಂತ್ರದಲ್ಲಿ ಯಾವ ದೇವರ ವಿಷಯದ ಬಗ್ಗೆ ಮಾತುಗಳಿರುತ್ತದೋ ಅವರೇ ಮಂತ್ರದ ದೇವರು.

ವಿನಿಯೋಗ : ಮಂತ್ರಗಳ ಪ್ರಯೋಜನದ ಜ್ಞಾನ ವಿನಿಯೋಗದಿಂದ ಗೊತ್ತಾಗುತ್ತದೆ. ಉದಾಹರಣೆಗೆ ವಿವಾಹ ಸಂಸ್ಕಾರದಲ್ಲಿ ಲಾಜಾಹೋಮವನ್ನು ಮಾಡುತ್ತೇವೆ. "ಅರ್ಯಮಣಂದೇವಂ" ಮಂತ್ರವನ್ನು ಹೇಳುತ್ತೇವೆ. ಈ ಮಂತ್ರದ ಋಷಿಗಳು ಅಥರ್ವಣರು. ಈ ಮಂತ್ರವು ಅನುಷ್ಟುಪ್ ಛಂದಸ್ಸಿನಲ್ಲಿದೆ. ಈ ಮಂತ್ರದ ದೇವತೆ ಅಗ್ನಿ, ಅಗ್ನಿದೇವನನ್ನು ಸಂತೋಷಪಡಿಸಲು ಲಾಜಾ ಹೋಮವನ್ನು ಮಾಡಿ ಆಹುತಿಯನ್ನು ಕೊಡುತ್ತಾರೆ. ವೇದಪಾಠಗಳಲ್ಲಿ ಸ್ವರ ವ್ಯಂಜನಗಳು, ಉದಾತ್ತ, ಅನುದಾತ್ತ, ತ್ವರಿತ ಉಚ್ಚಾರಣೆಗಳನ್ನು ಮಾಡುತ್ತಾರೆ. ಅಶುದ್ಧ ಉಚ್ಚಾರಣೆ ಮಾಡಿದರೆ ಪಠನ ಮಾಡುವವರಿಗೆ ಅನಿಷ್ಟವಾಗುತ್ತದೆ. ಇದನ್ನು ತಡೆಗಟ್ಟಲು ೮ ಪಾಠಗಳನ್ನು ನಾವು ಆಗಲೇ ನೋಡಿಬಂದಿದ್ದೇವೆ.

ವೇದದ ವಿಷಯವನ್ನು ೪ ಭಾಗವಾಗಿ ವಿಂಗಡಿಸಿದ್ದಾರೆ. ಅವುಗಳು ಯಾವುವೆಂದರೆ - ೧. ಸಂಹಿತಾ, ೨. ಬ್ರಾಹ್ಮಣ, ೩. ಅರಣ್ಯಕ, ೪. ಉಪನಿಷತ್ತು, ಸಂಹಿತೆಗಳ ಮಂತ್ರವನ್ನು ಧಾರ್ಮಿಕ ವಿಧಿ ಅನುಷ್ಠಾನಗಳಲ್ಲಿ ಪಠನ ಮಾಡುತ್ತಾರೆ. ಬ್ರಾಹ್ಮಣಗಳಲ್ಲಿ ಮಂತ್ರಗಳನ್ನು ಎಲ್ಲಿ? ಹೇಗೆ? ಯಾವ ಕಾರಣಕ್ಕಾಗಿ ಪಾಠಮಾಡಬೇಕು? ಎಂಬುದರ ಬಗ್ಗೆ ವಿವರಣೆಗಳಿವೆ. ಅರಣ್ಯಕಗಳಲ್ಲಿ ವಾನಪ್ರಸ್ಥಜೀವನಕ್ಕೆ ಸಂಬಂಧಪಟ್ಟ ದೈನಿಕ ಕಾರ್ಯಕಲಾಪಗಳ ವಿಧಿನಿಯಮಗಳ ವರ್ಣನೆಯಿದೆ. ವಾನಪ್ರಸ್ಥಾಶ್ರಮದಲ್ಲಿ ಅರಣ್ಯಗಳಲ್ಲಿ ವಾಸಮಾಡುತ್ತಾ ಜೀವನವನ್ನು ಕಳೆಯುತ್ತಿದ್ದರು. ಅವರಿಗೆ ಸಂಬಂಧಪಟ್ಟಿದ್ದಾಗಿದೆ. ಉಪನಿಷತ್ತುಗಳಲ್ಲಿ ದಾರ್ಶನಿಕ ಸಿದ್ಧಾಂತಗಳ ಗೂಢವಿಚಾರಗಳಿವೆ.

ವೇದಗಳ ಶಾಖೆಗಳು: ಶಾಖೆಗಳೆಂದರೇ ವಿಭಾಗಗಳಲ್ಲ, ಗ್ರಂಥಗಳ ಅಧ್ಯಾಯವೆಂದು ಅರ್ಥ, ವೇದಗಳ ಸಂಪಾದನೆಯ ಕ್ರಮಗಳ ಭೇದಗಳು ಇದರಲ್ಲಿ ಅಡಕವಾಗಿದೆ. ಒಬ್ಬ ಋಷಿಯು ತನ್ನ ಶಿಷ್ಯನಿಗೆ ವೇದಗಳನ್ನು ದೇವತೆಗಳ ಕ್ರಮಗಳಲ್ಲಿ ಕಂಠಪಾಠ ಮಾಡಿಸಿದನೆಂದರೆ ಮತ್ತೊಬ್ಬ ಋಷಿ ಛಂದಸ್ಸಿನ ಕ್ರಮದಲ್ಲಿ ಕಂಠಪಾಠ ಮಾಡಿಸಿದನು. ಬೇರೊಬ್ಬ ಋಷಿ, ಋಷಿ ಕ್ರಮದಲ್ಲಿ ವೇದಗಳನ್ನು ಕಂಠಪಾಠ ಮಾಡಿಸಿದನೆಂದರೆ ಮತ್ತೊಬ್ಬ ನಿಯೋಗಕ್ರಮದಲ್ಲಿ ಕಂಠಪಾಠ ಮಾಡಿಸಿದರು. ಈ ಕ್ರಮಬೇಧದಿಂದ ಒಂದೇ ವೇದಕ್ಕೆ ೪ ಶಾಖೆಗಳಾದವು. ಪ್ರತಿಯೊಂದು ಶಾಖೆಯಲ್ಲೂ ಮಂತ್ರಗಳು ಒಂದಾದರೂ ಅದರ ಕ್ರಮ ಭಿನ್ನವಾಗಿದೆ. ಅಷ್ಟೇ. ಆದ್ದರಿಂದ ವೇದದ ಒಂದು ಶಾಖೆ ಸಿಕ್ಕಿದರೆ ಪೂರ್ಣವೇದವು ಸಿಕ್ಕಿದಂತೆ ಆಗುತ್ತದೆ. ಆದ್ದರಿಂದ ೪ ಶಾಖೆಗಳಲ್ಲಿ ೧ ಶಾಖೆ ಕಳೆದು ಹೋದರೂ ವೇದ ಲುಪ್ತವಾಗಲು ಸಾಧ್ಯವಿಲ್ಲ.

## ೧. ಋಗ್ವೇದ

ಋಗ್ವೇದಕ್ಕೆ ೨೧ ಶಾಖೆಗಳಿದ್ದವು. ಇದರಲ್ಲಿ ಶುದ್ಧ ರೂಪದಲ್ಲಿ ಸಿಕ್ಕಿರುವುದು ಶಾಕಲ್ಯಶಾಖೆ ಒಂದು ಮಾತ್ರ. ಋಗ್ವೇದ ಮಂತ್ರಗಳಿಗೆ ೪ ರುಚಾಗಳಿವೆ. ೩ ಮತ್ತು ೨ ಪಂಕ್ತಿಗಳಲ್ಲಿ ಛಂದೋಬದ್ಧವಾಗಿದೆ ಗಾಯತ್ರಿ, ಅನುಷ್ಟುಪ್, ಬೃಹತಿ, ಪಂಕ್ತಿ, ತ್ರಿಷ್ಟುಪ್, ಜಗತಿ ಮುಂತಾದ ಛಂದಸ್ಸಿನಿಂದ ರಚಿತವಾಗಿದೆ. ಮಂತ್ರಗಳಲ್ಲಿ ಸ್ತುತಿ, ಕರ್ಮಕಾಂಡ, ದರ್ಶನ ಶಾಸ್ತ್ರಕ್ಕೆ ಸಂಬಂಧಪಟ್ಟ ಜ್ಞಾನವಿದೆ.

ಋಗ್ವೇದಕ್ಕೆ ಮೊಟ್ಟಮೊದಲು ಸಿಕ್ಕಿರುವ ಭಾಷ್ಯ ಸ್ಕಂದ ಸ್ವಾಮಿಯವರದು, ಇದನ್ನು ವೈದಿಕಕಾಲದಲ್ಲಿ ಬಹಳ ಗೌರವದಿಂದ ಕಾಣುತ್ತಿದ್ದರು. ಶಾಕಲ್ಯರು ಋಗ್ವೇದಕ್ಕೆ ಪದಪಾಠವನ್ನು ಪ್ರಸ್ತುತಪಡಿಸಿದ್ದಾರೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಶಾಕಲ್ಯರು ಜನಕನ ಸಭೆಯಲ್ಲಿ ಯಾಜ್ಞವಲ್ಕರ ಜೊತೆ ಶಾಸ್ತ್ರಾರ್ಥ ಮಾಡಿದರೆಂದು ವರ್ಣನ ಬರುತ್ತದೆ. ಇವರು ಉಪನಿಷತ್ ಕಾಲದ ಋಷಿಗಳು. ಪಾಶ್ಚಾತ್ಯ ವಿದ್ವಾಂಸರಾದ ಮಾಕ್ಸ್‌ಮೂಲರ್ ವೇದಗಳ ಬಗ್ಗೆ ಅನೇಕ ಗ್ರಂಥಗಳನ್ನು ರಚಿಸಿ ಪಶ್ಚಿಮದ ದೇಶಗಳಿಗೆ ವೇದ ಜ್ಞಾನವನ್ನು ನೀಡಿದ್ದರು. ಭಾರತೀಯ ಧರ್ಮದರ್ಶನ, ಸಂಸ್ಕೃತಿಗಳ ಪರಿಚಯ ಮಾಡಿಕೊಟ್ಟು ಭಾರತದ ಹಿರಿಮೆಯನ್ನು ಹೆಚ್ಚಿಸಿದರು. ಋಗ್ವೇದದ ಸಾಯಣರ ಭಾಷ್ಯವನ್ನು ಸಂಪಾದನೆ ಮಾಡಿದರು.

ಜರ್ಮನ್ ವಿದ್ವಾಂಸ ಡಾ|| ವಿಲ್ಸನ್‌ರವರು ಋಗ್ವೇದವನ್ನು ಜರ್ಮನ್ ಭಾಷೆಯಲ್ಲಿ ಅನುವಾದ ಮಾಡಿದರು. ಗ್ರಾಸ್ ಮ್ಯಾನ್ ಋಗ್ವೇದದ ಪಠ್ಯಾನುವಾದವನ್ನು ಪ್ರಸ್ತುತಪಡಿಸಿದರು. ಡಾ||

ಓಲ್ಡನ್‌ಬರ್ಗನು ವೇದಗಳನ್ನು ಆಲೋಚನಾತ್ಮಕ ದೃಷ್ಟಿಯಿಂದ ೨ ಭಾಗಗಳ ಪುಸ್ತಕಗಳನ್ನು ಬರ್ಲಿನ್‌ನಲ್ಲಿ ಪ್ರಕಾಶಿಸಿದನು. ಭಾರತದಲ್ಲಿ ಅನೇಕ ವಿದ್ವಾಂಸರು ವೇದಗಳಿಗೆ ಭಾಷ್ಯವನ್ನು ಬರೆದಿದ್ದಾರೆ. ಅವರಲ್ಲಿ ಮುಖ್ಯವಾದವರು ಸ್ಕಂದಸ್ವಾಮಿ, ನಾರಾಯಣ, ಉದ್ಗೀಥ, ಆತ್ಮಾನಂದ, ಸಾಯಣ ಮುಂತಾದವರು.

ಋಗ್ವೇದಕ್ಕೆ ಹೆಚ್ಚು ಪ್ರಾಶಸ್ತ್ಯ ಸಿಕ್ಕಿದೆ. ಈ ಋಗ್ವೇದವನ್ನು ೨ ಪ್ರಕಾರವಾಗಿ ವಿಭಾಗಿಸಿದ್ದಾರೆ.

ಅಷ್ಟಕ ಕ್ರಮ : ಋಗ್ವೇದವನ್ನು ೮ ಅಷ್ಟಕಗಳಲ್ಲಿ ವಿಭಜಿಸಿದ್ದಾರೆ. ಪ್ರತಿಯೊಂದು ಅಷ್ಟಕದಲ್ಲಿ ೮ ಅಧ್ಯಾಯಗಳಿವೆ. ಹೀಗೆ ಋಗ್ವೇದದಲ್ಲಿ ೬೪ ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯದಲ್ಲೂ ವರ್ಗಗಳಿವೆ. ಇವೆಲ್ಲವೂ ಅಧ್ಯಯನ ಮಾಡಲಿಕ್ಕೆ ಸುಲಭವಾಗಲೆಂದು ವಿಭಜಿಸಿದ್ದಾರೆ. ವರ್ಗ ಎಂಬುದು ರುಚಾಗಳ ಸಮುದಾಯಕ್ಕೆ ಕೊಟ್ಟಿರುವ ಹೆಸರು,

೫ ಮಂತ್ರಗಳ ಸಮೂಹವನ್ನು ವರ್ಗ ಎಂದು ಹೇಳುತ್ತಾರೆ. ಇದರಲ್ಲಿ ೯ ಮಂತ್ರಗಳ ಸಮೂಹದ ವರ್ಗವೂ ಇದೆ. ಸಮಸ್ತ ವರ್ಗಗಳ ಸಂಖ್ಯೆ ೨೦೦೬, ೨ನೇ ಪ್ರಕಾರದಲ್ಲಿ ಮಂಡಲ ಕ್ರಮವಿದೆ. ಈ ಮಂಡಲ ಕ್ರಮವು ಹೆಚ್ಚು ಮಹತ್ವಪೂರ್ಣವಾದುದು, ಐತಿಹಾಸಿಕ ಮತ್ತು ವೈಜ್ಞಾನಿಕ ದೃಷ್ಟಿಯಿಂದಲೂ ಅಚ್ಚುಕಟ್ಟಾಗಿದೆ. ಋಗ್ವೇದವನ್ನು ೧೦ ಮಂಡಲಗಳನ್ನಾಗಿ ವಿಭಜಿಸಿದ್ದಾರೆ. ಆದ್ದರಿಂದ ಋಗ್ವೇದವನ್ನು ದಶತಯೀ ಎಂದು ಹೇಳುತ್ತಾರೆ. ಪ್ರತಿಯೊಂದು ಮಂಡಲದಲ್ಲೂ ಅನೇಕ ಅನುವಾಕಗಳು (ಅಧ್ಯಾಯ) ಅದರ ಒಳಗೆ ಸೂಕ್ತಗಳು ಮತ್ತು ಸೂಕ್ತಗಳ ಒಳಗೆ ಮಂತ್ರ ಅಥವಾ ರುಚಾಗಳಿವೆ. ಹೀಗೆ ಮಂತ್ರಗಳ ಎಣಿಕೆಯೇ ಅಲ್ಲ, ಋಗ್ವೇದದ ಅಕ್ಷರಗಳ ಎಣಿಕೆಯನ್ನು ಕೂಡ ಮಾಡಿ ಇಟ್ಟಿದ್ದಾರೆ. ಅದುದರಿಂದ ಒಂದು ಅಕ್ಷರವನ್ನು ಸಹ ಅಪ್ರಾಮಾಣಿಕ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಋಗ್ವೇದದ ೧೦ ಮಂಡಲಗಳ ಅನುವಾಕಗಳು ೮೫, ಸೂಕ್ತಗಳು ೧೦೧೭ ಹೀಗೆ ಋಗ್ವೇದದ ಎಲ್ಲ, ಸೂಕ್ತಗಳ ರುಚಾಗಳ ಸಂಖ್ಯೆ ೧೦೫೮೦.೨೫. ರುಚಾಗಳ ಶಬ್ದದ ಸಂಖ್ಯೆ ೧೫೩೮೨೬, ಅಕ್ಷರಗಳ ಸಂಖ್ಯೆ ೪೩೨೦೦೦, ಸರಾಸರಿ ಪ್ರತಿಯೊಂದು ಮಂತ್ರದಲ್ಲೂ ೧೫ ಶಬ್ದಗಳಿವೆ. ಪ್ರತಿಯೊಂದು ಶಬ್ದದಲ್ಲೂ ೩ ಅಕ್ಷರಗಳಿವೆ. ಈ ಗಣನೆ ಸರ್ವಾನುಕ್ರಮಣಿಯ ಆಧಾರದ ಮೇಲೆ ಕೊಡಲ್ಪಟ್ಟಿದೆ.

ಋಗ್ವೇದದಲ್ಲಿ ಸ್ತುತಿಗಳಿವೆ. ಸುಂದರವಾದ ಸಂಭಾಷಣೆಗಳಿವೆ. ಸಂಭಾಷಣೆಗಳಲ್ಲಿ ಪುರೂರವ - ಊರ್ವಶಿ ಸಂವಾದ, ಮುಖ್ಯವಾದವುಗಳು, ಇವಲ್ಲದೆ ದಾರ್ಶನಿಕ ಸೂಕ್ತಗಳಿವೆ. ನಾಸದೀಯ ಸೂಕ್ತ, ಪುರುಷ ಸೂಕ್ತ, ಹಿರಣ್ಯಗರ್ಭಸೂಕ್ತ ಮತ್ತು ವಾಕ್ ಸೂಕ್ತ ಮುಖ್ಯವಾದವುಗಳು, ಇವುಗಳಲ್ಲಿ ಗಂಭೀರವಾದ ದಾರ್ಶನಿಕ ತತ್ವಗಳು, ಗೂಢರಹಸ್ಯಾನುಭೂತಿಗಳು (ಅನುಭಾವಗಳು) ಹೊಸ ಕಲ್ಪನೆಗಳು ಕಂಡುಬರುತ್ತವೆ ಇವೆಲ್ಲವೂ ಮೌಲಿಕವಾದ ವಿಚಾರಧಾರೆಗಳಾಗಿವೆ.

## ೨. ಯಜುರ್ವೇದ

ಯಜುರ್ವೇದಕ್ಕೂ ಪದಪಾಠ ಪ್ರಾಪ್ತವಾಗಿದೆ, ಮಾಧ್ಯಂದಿನ ಸಂಹಿತೆಯ ಪದಪಾಠ, ಕಣ್ವಸಂಹಿತೆಯ ಪದಪಾಠಗಳು ಉಪಲಬ್ಧವಾಗಿವೆ. ಇದನ್ನು ರಚಿಸಿದವರು ಯಾರು ಎಂದು ಗೊತ್ತಾಗುವುದಿಲ್ಲ. ಯಜು ಎಂದರೇ ಉಪಾಸನೆ, ಯಜುರ್ವೇದದ ಉದ್ದೇಶ ಪವಿತ್ರ ಉಪಾಸನೆ. ಯಜ್ಞಾದಿ ಕರ್ಮಕಾಂಡಗಳ ಮಹತ್ವ ಮತ್ತು ಅದರ ವಿಧಿಗಳನ್ನು ಸ್ಪಷ್ಟಪಡಿಸುವುದು.

ಅಧ್ವರ್ಯುವೇ ಕರ್ಮಕ್ಕೆ ತಕ್ಕಂತೆ ಯಜುರ್ವೇದದ ಯಜುಶ್‌ಗಳು ಸಂಗ್ರಹವಾಗಿವೆ. ಯಜುಶ್ ಶಬ್ದಕ್ಕೆ ಸಂಖ್ಯೆಯು ನಿಶ್ಚಿತವಾಗಿಲ್ಲ ಎಂದರ್ಥ ಅಂದರೆ ಶಬ್ದಗಳಿಗೆ ಅಕ್ಷರಗಳ ಸಂಖ್ಯೆ ನಿಶ್ಚಿತವಾಗಿಲ್ಲ, "ಗದ್ಯಾತ್ಮಕೋ ಯಜುಃ" ಎಂದರೆ ಯಜುರ್‌ವೇದ ಗದ್ಯದ ರೂಪದಲ್ಲಿದೆ ಎಂದು ನಿಶ್ಚಯವಾಗಿ ಗೊತ್ತಾಗುತ್ತದೆ. ಯಜುರ್ವೇದಕ್ಕೆ ೨ ಸಂಪ್ರದಾಯಗಳಿವೆ. ಬ್ರಹ್ಮ ಸಂಪ್ರದಾಯ ಮತ್ತು ಆದಿತ್ಯಸಂಪ್ರದಾಯ, ಶತಪಥ ಬ್ರಾಹ್ಮಣದ ಅನುಸಾರವಾಗಿ ಆದಿತ್ಯ ಯಜುಃ, ಶುಕ್ಲ, ಯಜುಃ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದು ಯಾಜ್ಞವಲ್ಕ್ಯರಿಂದ ಆಖ್ಯಾತವಾಗಿದೆ. ಬ್ರಹ್ಮಸಂಪ್ರದಾಯವು ಕೃಷ್ಣ ಯಜುರ್ವೇದದ ಭಾಗವಾಗಿದೆ. ಈ ಶುಕ್ಲ ಕೃಷ್ಣತ್ವದ ಭೇದಗಳು ಅದರ ಸ್ವರೂಪದ ಆಧಾರದ ಮೇಲೆ ಕೊಟ್ಟಿದ್ದಾರೆ. ಶುಕ್ಲ ಯಜುರ್ವೇದದಲ್ಲಿ ದರ್ಶ ಪೂರ್ಣಮಾಸ ಮುಂತಾದವುಗಳ ಅನುಷ್ಠಾನಕ್ಕೆ ಸಂಬಂಧಪಟ್ಟ ಮಂತ್ರಗಳು ಮಾತ್ರ ಸಂಕಲನವಾಗಿದೆ. ಕೃಷ್ಣ ಯಜುರ್ವೇದದಲ್ಲಿ ಮಂತ್ರಗಳ ಜೊತೆ ಅವನ್ನು ಪ್ರಯೋಗ ಮಾಡುವ ಮತ್ತು ನಿಯಂತ್ರಿಸುವ ಬ್ರಾಹ್ಮಣಗಳ ಸಮ್ಮಿಶ್ರಣವಾಗಿದೆ. ಮಂತ್ರಗಳು, ಬ್ರಾಹ್ಮಣಗಳು ಒಂದೆಡೆ ಸೇರಿರುವ ಕಾರಣದಿಂದ ಇದಕ್ಕೆ ಕೃಷ್ಣತ್ವ ಬಂತು. ಯಾವುದೂ ಸೇರದೆ ಇದ್ದ ಕಾರಣ ಮೊದಲನೇ ಭಾಗ ಶುಕ್ಲತ್ವವಾಯಿತು, ಕೃಷ್ಣಯಜುರ್ವೇದದ ಪ್ರಧಾನ ಶಾಖೆ ತೈತ್ತಿರೀಯ, ಶತಪಥಬ್ರಾಹ್ಮಣ ಮತ್ತು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಯಾಜ್ಞವಲ್ಕ್ಯವಾಜಸನೇಯರನ್ನು ಅತಿದೊಡ್ಡ ವಿದ್ವಾಂಸರೆಂದು ಪರಿಗಣಿಸಿದ್ದಾರೆ. ಶುಕ್ಲ ಯಜುರ್ವೇದದ ಮಂತ್ರಸಂಹಿತೆಯನ್ನು ವಾಜಸನೇಯ ಸಂಹಿತಾ ಎಂದು ಹೇಳುತ್ತಾರೆ. ಇದರಲ್ಲಿ ೪೦ ಅಧ್ಯಾಯಗಳಿವೆ. ಕೊನೆಯ ೧೫ ಅಧ್ಯಾಯಗಳನ್ನು ಆಧುನಿಕ ಅಧ್ಯಾಯಗಳೆಂದು ಹೇಳುತ್ತಾರೆ. ಶುಕ್ಲ ಯಜುರ್ವೇದದ ೨೫ ಶಾಖೆಗಳು, ಕೃಷ್ಣಯಜುರ್ವೇದದ ೮೬ ಶಾಖೆಗಳು ಕಂಡುಬರುತ್ತವೆ.

೧೬ ನೇ ಅಧ್ಯಾಯದಲ್ಲಿ ಶತರುದ್ರೀಯ ಹೋಮದ ಪ್ರಸಂಗ ಬರುತ್ತದೆ. ಇದರಲ್ಲಿ ರುದ್ರಾಧ್ಯಾಯ ಬಹಳ ಉಪಯೋಗವಾದುದು, ಇದರಲ್ಲಿ ರುದ್ರನ ಕಲ್ಪನೆ ಸಾಂಗೋಪಾಂಗವಾಗಿ ವಿವೇಚಿಸಿದ್ದಾರೆ, ೨೨-೨೫ ನೇ ಅಧ್ಯಾಯದಲ್ಲಿ ಅಶ್ವಮೇಧ ಯಾಗದ ವಿಶಿಷ್ಟ ಮಂತ್ರಗಳ ವಿವೇಚನೆಯಿದೆ. ೩೧ ನೇ ಅಧ್ಯಾಯದಲ್ಲಿ ಪುರುಷಸೂಕ್ತವಿದೆ. ಇದರಲ್ಲಿ ಋಗ್ವೇದದ ಮಂತ್ರದ ಜೊತೆಗೆ ೬ ಹೊಸ ಮಂತ್ರಗಳನ್ನು ಜೋಡಿಸಿದ್ದಾರೆ. ೩೨ ನೇ ಅಧ್ಯಾಯದಲ್ಲಿ ಹಿರಣ್ಯ ಗರ್ಭಸೂಕ್ತವಿದೆ. ೩೪ ರಲ್ಲಿ ಶಿವಸಂಕಲ್ಪ, ಉಪನಿಷತ್ ಮನಸ್ಸು ಮತ್ತು ಅದರ ವೃತ್ತಿಗಳ ಬಗ್ಗೆ ವಿವರಣೆಯಿದೆ. ೩೫ ರಲ್ಲಿ ಪಿತೃಮೇಧಮಂತ್ರಗಳಿವೆ.

ಕೊನೆಯ ಅಧ್ಯಾಯವಾದ ೪೦ ರಲ್ಲಿ ಈ ಶಾವಾಸ್ಯೋಪನಿಷತ್ ಇದೆ.

ಶುಕ್ಲ ಯಜುರ್ವೇದದ ೨ ಶಾಖೆಗಳೆಂದರೇ ಮಾಧ್ಯಂದಿನ, ಮತ್ತು ಕಾಣ್ವ, ಕಾಣ್ವ ಶಾಖೆಯು ಮಹಾರಾಷ್ಟ್ರದಲ್ಲೂ, ಮಾಧ್ಯಂದಿನ ಶಾಖೆಯು ಉತ್ತರಪ್ರದೇಶದಲ್ಲೂ ಪ್ರಚಲಿತವಾಗಿದೆ. ಕೃಷ್ಣ ಯಜುರ್ವೇದದ ೮೦ ಶಾಖೆಗಳಿವೆ. ಅದರಲ್ಲಿ ೪ ಶಾಖೆಗಳು ಮಾತ್ರ ಪುಸ್ತಕದ ರೂಪದಲ್ಲಿ ಅಚ್ಚಿಟ್ಟಿದ್ದಾರೆ. ಅವುಗಳು ತೈತ್ತಿರೀಯಾ, ಮೈತ್ರಾಯಣೀ, ಕಠ ಮತ್ತು ಕಪಿಷ್ಠಲ. ಕಠಶಾಖೆ, ತೈತ್ತಿರೀಯ ಸಂಹಿತೆಯು ದಕ್ಷಿಣಭಾರತದಲ್ಲಿ ಪ್ರಚಲಿತವಾಗಿವೆ. ಮುಖ್ಯವಾಗಿ ಆಂಧ್ರಪ್ರದೇಶ, ತಮಿಳ್ನಾಡು, ಮಹಾರಾಷ್ಟ್ರದಲ್ಲಿ ಇದರ ಉಪಯೋಗವಿದೆ. ಈ ಸಂಹಿತೆಯಲ್ಲಿ ೭ ಕಾಂಡಗಳು. ಈ ಕಾಂಡಗಳಲ್ಲಿ ೪೪ ಪ್ರಪಾಠಕಗಳು ೬೩೧ ಅನುವಾಕಗಳಿವೆ. ಇದರಲ್ಲಿ ಪಾರೋಡಾಶ, ಯಾಜಮಾನ್, ವಾಜಪೇಯ, ರಾಜಸೂಯ ಮುಂತಾದ ಯಾಗಾನುಷ್ಠಾನಗಳ ವಿಶದವರ್ಣನೆಯಿದೆ. ಆಚಾರ್ಯ ಸಾಯಣರ ಶಾಖೆಯಾಗಿದೆ.

ಮೈತ್ರಾಯಿಣೀ ಸಂಹಿತೆಯು ಗದ್ಯಪದ್ಯಾತ್ಮಕ ಚಂಪೂರೂಪದಲ್ಲಿದೆ. ಇದರಲ್ಲಿ ಮಂತ್ರ ಮತ್ತು ಬ್ರಾಹ್ಮಣಗಳ ಸಮ್ಮಿಶ್ರಣವಾಗಿದೆ. ಪ್ರಥಮ ಅಧ್ಯಾಯವು ೧೧ ಪ್ರಪಾಠಕಗಳಲ್ಲಿ ವಿಭಜಿಸಲ್ಪಟ್ಟಿದೆ, ದ್ವಿತೀಯ ಕಾಂಡದಲ್ಲಿ ೧೩ ಪ್ರಪಾಠಕಗಳಿವೆ. ತೈತ್ತರೀಯ ಕಾಂಡದಲ್ಲಿ ೧೬ ಪ್ರಪಾಠಕಗಳಿವೆ. ಚತು

ರ್ಥದಲ್ಲಿ ೧೬ ಪ್ರಚಾರಗಳಿವೆ. ಒಟ್ಟು ೨೧೪೪ ಮಂತ್ರಗಳು ೧೭೦೧ ರುಚಾಗಳು ಋಗ್ವೇದದಿಂದ ಉದ್ಧರಿಸಲಾಗಿದೆ. ಕಠಸಂಹಿತೆ, ಯಜುರ್ವೇದದ ೨೭ ಮುಖ್ಯ ಶಾಖೆಗಳಲ್ಲಿ ಅತ್ಯಂತ ಉತ್ತಮ ವೆಂದು ಪರಿಗಣಿಸಲ್ಪಟ್ಟಿದೆ. ಪುರಾಣಗಳಲ್ಲಿ ಕಾಠ ಕರು ಮಧ್ಯಪ್ರದೇಶದ ನಿವಾಸಿಗಳಾಗಿದ್ದರು, ಪತಂ ಜಲಿಯು ಹೇಳಿರುವಂತೆ ಕಠಸಂಹಿತೆಯು ಪ್ರತಿ ಯೊಂದು ಹಳ್ಳಿಯಲ್ಲೂ ಪ್ರಚಲಿತವಾಗಿತ್ತು. ಕಠ ಸಂಹಿತೆಯಲ್ಲಿ ೫ ಖಾಂಡಗಳಿವೆ. ಖಾಂಡಗ ಳನ್ನು ಸ್ಥಾನಕಗಳನ್ನಾಗಿಯೂ ಅನುವಚನಗಳನ್ನಾ ಗಿಯೂ, ಅನುವಾಕ್‌ಗಳನ್ನಾಗಿಯೂ, ಮಂತ್ರಗಳ ನ್ನಾಗಿಯೂ, ವಿಂಗಡಿಸಿದ್ದಾರೆ, ಇವರಲ್ಲಿ ೪೦ ಸ್ಥಾನ ಕಗಳು, ೧೩ ಅನುವಚನಗಳು, ೮೪೩ ಅನುವಾಕ್ ಗಳು, ೩,೯೧ ಮಂತ್ರಗಳು, ೧೮೦೦೦ ಮಂತ್ರ ಬ್ರಾಹ್ಮ ಣಗಳು ಅಡಗಿವೆ.

ಚರಣವ್ಯೂಹದ ಪ್ರಕಾರ ಚರಕ ಶಾಖೆಯಾಳಗೆ ಕಪಿಷ್ಠಲ ಕಠಸಂಹಿತಾ ಬರುತ್ತದೆ. ಇದರಲ್ಲಿ ೮ ಅಧ್ಯಾ ಯಗಳಿವೆ.

## ೩. ಸಾಮವೇದ

ವೈದಿಕ ಸಾಹಿತ್ಯದಲ್ಲಿ ಸಾಮವೇದಕ್ಕೆ ಹೆಚ್ಚು ಮಹತ್ವ ಕೊಡಲಾಗುತ್ತದೆ. ಯಾರು ಪುರುಷಸಾ ಮವನ್ನು ಅರಿತಿದ್ದಾರೋ ಅವರು ವೇದದ ರಹಸ್ಯ ವನ್ನು ಅರಿತಿರುತ್ತಾರೆ. ಭಗವದ್ಗೀತೆಯಲ್ಲಿ ವೇದ ಗಳಲ್ಲಿ ನಾನು ಸಾಮವೇದ ಎಂದು ಶ್ರೀಕೃಷ್ಣ ತನ್ನ ಪರಿಚಯವನ್ನು ಮಾಡಿಕೊಟ್ಟಿದ್ದಾನೆ. ಸಾಮವೇದ ದಲ್ಲಿ ಪ್ರಣವ ಮಂತ್ರ ಅಂದರೆ ಓಂಕಾರದ ಮಹ ತ್ವವನ್ನು ಹೇಳಲಾಗಿದೆ. ಸಾಮ ಎಂಬ ಶಬ್ದವು ೨ ಅರ್ಥದಲ್ಲಿ ಪ್ರಯೋಗಿಸಲಾಗಿದೆ. ಋಕ್ ಮಂತ್ರಗಳ ಗಾಯನ ಮಾಡುವ ವೇದ ಸಾಮ ವೆಂದು ಒಂದು ಅರ್ಥ, ಸಾಮ ಮಂತ್ರಗಳ ಸಂಕ ಲನವನ್ನು ಉದ್ಗಾತೃ ಎಂಬ ಋತ್ವಿಜನಿಗೆ ಅನು ಕೂಲವಾಗುವಂತೆ ದೇವತೆಗಳ ಸ್ತುತಿ ಮಾಡಲ್ಪ ಟ್ಟಿದೆ. ಸಾಮವೇದದ ಆಧಾರ ಋಕ್ ಮಂತ್ರ ಗಳೇ. ಅವಶ್ಯಕತೆಗೆ ಅನುಸಾರವಾಗಿ ವಿವಿಧ ಸ್ವರ ಗಳಲ್ಲಿ ಇದನ್ನು ಹಾಡುತ್ತಾರೆ. ಋಕ್ ಯಜು ರ್ವೇದಗಳನ್ನು ಗಂಡ ಹೆಂಡತಿ ಎಂದು ಹೇಳು ತ್ತಾರೆ. ಆಕಾಶ ಮತ್ತು ಪೃಥ್ವಿಯ ಸಂಯೋಗವೆಂದು ಪರಿಗಣಿಸುತ್ತಾರೆ. ಸಾಮವೆಂದರೆ ಹಾಡುವುದು, ಸಾ ಎಂದರೇ ಋಕ್ ಅಂ ಎಂದರೇ ಗಾಂಧಾರ, ಮುಂತಾದ ಸ್ವರಗಳು, ಋಗ್ವೇದಕ್ಕೆ ಸಂಬಂಧಪಟ್ಟ ಸ್ವರಪ್ರಧಾನ ಗಾಯನವೇ ಸಾಮವೇದ, ಈ ಸಾಮ ವೇದವನ್ನು ಸಾಮಯೋನಿ ಎಂದೂ ಹೇಳುತ್ತಾರೆ.

ಸಾಮವೇದದಲ್ಲಿ ೨ ಪ್ರಧಾನಭಾಗಗಳಿವೆ. ಆರ್ಚಿಕ ಮತ್ತು ಜ್ಞಾನ. ಆರ್ಚಿಕವೆಂದರೇ ಋಕ್ ಸಮೂ ಹವಲ್ಲಿ ೨ ಭಾಗಗಳಾದ ಪೂರ್ವಾರ್ಚಿಕ, ಉತ್ತ ರಾರ್ಚಿಕ, ಪೂರ್ವಾರ್ಚಿಕದಲ್ಲಿ ೬ ಪ್ರಪಾಠಗಳು (ಅಧ್ಯಾಯ) ಇವೆ. ಪ್ರಪಾಠಕಗಳಲ್ಲಿ ೨ ಖಂಡಗ ಳಿವೆ. ಪ್ರತಿಯೊಂದು ಖಂಡದಲ್ಲೂ ಒಂದು ದಶತಿ, ಪ್ರತಿಯೊಂದು ದಶತಿಯಲ್ಲೂ ೧೦ ರುಚಾಗಳಿವೆ. ದಶತಿ ಎಂದರೆ ಸಂಖ್ಯೆಯಲ್ಲಿ ೧೦ ಎಂದರ್ಥ ೧೦, ೧೦ ಮಂತ್ರಗಳ ಸಮೂಹವಾಗಿದೆ, ಉತ್ತರಾರ್ಚಿಕ ದಲ್ಲಿ ೯ ಪ್ರಪಾಠಕಗಳಿವೆ. ಮೊದಲ ೫ ಪ್ರಪಾಠಕಗ ಳಲ್ಲಿ ಎರಡೆರಡು ಭಾಗವಿದೆ.

ಪ್ರಪಾಠಕಾರ್ಥ ಮತ್ತು ಮೂರು ಮೂರು ಅರ್ಥ ಗಳು ಇವೆ, ಋಗ್ವೇದದ ೧೫೦೪ ರುಚಾಗಳು ೯೩ ಸಾಮವೇದದ್ದೇ ಆದ ರುಚಾಗಳು ಸೇರಿವೆ. ಸಾಮ ಸಂಹಿತೆಯಲ್ಲಿ ಒಟ್ಟು ಮೊತ್ತ ೧೮೭೫ ರುಚಾಗ ಳಿವೆ. ಭಾಗವತ, ವಿಷ್ಣು, ಪುರಾಣ, ವಾಯುಪುರಾ ಣದ ಅನುಸಾರವಾಗಿ ವೇದವ್ಯಾಸರು ತಮ್ಮ ಶಿಷ್ಯ ಜೈಮಿನಿಗೆ ಸಾಮವೇದ ಹೇಳಿಕೊಟ್ಟರು. ಆದುದ ರಿಂದ ಜೈಮಿನಿಯನ್ನು ಸಾಮವೇದದ ಆದ್ಯ ಆಚಾ ರ್ಯರೆಂದು ಹೇಳುತ್ತಾರೆ. ಈ ಸಾಮವೇದವು ವಂಶ ಪಾರಂಪರ್ಯವಾಗಿ ತಂದೆಮಗನಿಗೂ, ಮಗ ತನ್ನ ಮಗನಿಗೂ, ಆ ಮಗ ತನ್ನ ಮಗನಿಗೂ ಹೇಳಿಕೊ ಟ್ಟಂತೆ ವರ್ಣನೆ ಬರುತ್ತದೆ.

ಸಾಮವೇದ ಗಾಯನವೇದವಾದುದರಿಂದ ಸಂಗೀತದ ರಾಗಭೇದಗಳ ಅನುಸಾರವಾಗಿ ಬಹ ಳಷ್ಟು ಶಾಖೆಗಳು ಹುಟ್ಟಿವೆ. ಇದುವರೆಗೂ ೧೦೦೦ ಶಾಖೆಗಳನ್ನು ಗುರುತಿಸಿದ್ದಾರೆ. ಅದರಲ್ಲಿ ಪೂರ್ಣ ವಾಗಿ ನಮಗೆ ಸಿಗುವುದು ೩ ಶಾಖೆಗಳು ಮಾತ್ರ ಅವುಗಳು ಕೌಥುಮಿ, ಜೈಮಿನಿ ಮತ್ತು ರಾಣಾಯ ನೀಯ.

### ಕೌಥುಮಿಶಾಖೆ :

ಇದು ಬಹಳ ಲೋಕ ಪ್ರಸಿದ್ಧವಾದ ಶಾಖೆ. ಶಂಕ ರಾಚಾರ್ಯರು ವೇದಾಂತ ಭಾಷ್ಯದಲ್ಲಿ ಅನೇಕ ಸ್ಥಳ ಗಳಲ್ಲಿ ಇದನ್ನು ಉದ್ಧರಿಸಿದ್ದಾರೆ. ೨೫ ಕಾಂಡಗಳುಳ್ಳ ದೊಡ್ಡ ತಾಂಡ್ಯ ಬ್ರಾಹ್ಮಣ ಇದರ ಶಾಖೆ. ಇದರಲ್ಲೇ ಛಾಂದೋಗ್ಯೋಪನಿಷತ್ ಬರುತ್ತದೆ. ಇದರ ಭಾಷ್ಯವನ್ನು ಆದಿಶಂಕರಾಚಾರ್ಯರು ಮಾಡಿದ್ದಾರೆ.

### ರಾಣಾಯನೀಯ ಶಾಖೆ :

ಮಂತ್ರ ಗಣನೆಯ ದೃಷ್ಟಿಯಿಂದ ಕೌಥುಮಶಾ ಖೆಗೂ ರಾಣಾಯನೀಯ ಶಾಖೆಗೂ ವ್ಯತ್ಯಾಸವಿಲ್ಲ. ಕೇವಲ ಉಚ್ಚಾರಣೆಯಲ್ಲಿ ಅಂತರವಿದೆ. ಕೌಥುಮಿ ಯದಲ್ಲಿ 'ಹಾ ಉ' ಮತ್ತು 'ರಾ ಇ'ಯನ್ನು ರಾಣಾ ಯನೀಯದಲ್ಲಿ 'ಹಾವು' ಮತ್ತು 'ರಾಯಿ' ಎಂದು ಹೇಳುತ್ತಾರೆ. ಇದು ಭಾಷಾ ವಿಜ್ಞಾನದ ದೃಷ್ಟಿ ಯಿಂದ ಬಹಳ ಮಹತ್ವವಾದುದು. ಸ್ವರ ವ್ಯಂಜನ ಆಗುತ್ತದೆ. ಏ ಮತ್ತು ಓಗಳ ಉಚ್ಚಾರಣೆಯನ್ನು ಎ ಮತ್ತು ಒ ಎಂದು ಉಚ್ಚರಿಸುತ್ತಾರೆ. ಭಾಷಾ ವಿಜ್ಞಾನದ ಪರಂಪರೆ ನಮ್ಮ ಭಾರತದಲ್ಲಿ ಎಷ್ಟು ಹಳೆಯದೆಂದು ಗೊತ್ತಾಗುತ್ತದೆ.

### ಜೈಮಿನೀಯ ಶಾಖೆ :

ಈ ಶಾಖೆಯ ಸಂಹಿತೆ, ಬ್ರಾಹ್ಮಣ ಶ್ರೌತ ಮತ್ತು ಗುಹ್ಯ ಸೂತ್ರಗಳು ಎಲ್ಲವೂ ಸಿಕ್ಕಿವೆ. ನಾಗರೀ ಲಿಪಿ ಯಲ್ಲಿ ಇದು ನಿಬದ್ಧವಾಗಿದೆ. ಮಂತ್ರಗಳ ಸಂಖ್ಯೆ ೧೬೮೭. ಅಂದರೆ ಕೌಥುಮಶಾಖೆಗಿಂತ ೧೮೨ ಮಂತ್ರಗಳು ಕಡಿಮೆಯಾಗಿವೆ. ಇದರಲ್ಲಿ ಪಾಠ ಭೇದಗಳು ನಾನಾ ಪ್ರಕಾರವಾಗಿದೆ. ಕಾಥುಮಿ ಯಲ್ಲಿ ೨೭೨೨ ಅಂದರೆ ಜೈಮಿನೀಯದಲ್ಲಿ ೩೬೮೧ ಆಗಿದೆ. ಇದರ ತಲವಕಾರ ಶಾಖೆಯಲ್ಲಿ ಕೇನೋ ಪನಿಷತ್ ನಿಬದ್ಧವಾಗಿದೆ. ಸಾಮಮಂತ್ರಗಳ ಪದ ಒಟ್ಟು ೧೪೪೦೦೦ ಎಂದು ಹೇಳುತ್ತಾರೆ. ಆದರೆ ಸಿಕ್ಕಿರುವುದು ಬಹಳ ಕಡಿಮೆ.

ಭಾರತೀಯ ಸಂಗೀತ ಶಾಸ್ತ್ರದ ಮೂಲ ಸಾಮ ಗಾಯನದ ಆಧಾರದ ಮೇಲೆ ನಿಂತಿದೆ. ಸಂಗೀತವು ಬಹಳ ಸೂಕ್ಷ್ಮವಾದ, ತಿಳಿಯಾದ, ವೈಜ್ಞಾನಿಕ ಪದ್ಧತಿ ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ಸಾಮ ಯೋನಿ ಮಂತ್ರಗಳ ಆಧಾರದ ಮೇಲೆ ಋಷಿಗಳು ಗಾನಮಂತ್ರಗಳನ್ನು ರಚಿಸಿದ್ದಾರೆ.

೧. ಗೇಯಗಾನ ಅಂದರೆ ಗ್ರಾಮಗಳಲ್ಲಿ ಹಾಡು ವಂತೆ ಪ್ರಾಕೃತಿಕ ಗಾನ, ಇದನ್ನು ವೇಯಗಾನ ವೆಂದೂ ಹೇಳುತ್ತಾರೆ.

೨. ಅರಣ್ಯಕ ಗಾನ ೩. ವಾಹಗಾನ ೪. ಊಹ್ಯಗಾನ ಅಂದರೆ ರಹಸ್ಯಗಾನ. ವೇಯಗಾನವು ಪೂರ್ವಾರ್ಚಿಕ ಪ್ರಥಮ ೫ ಮಂತ್ರಗಳ ಆಧ್ಯಾಯ ಗಳ ಆಧಾರದ ಮೇಲಿದೆ. ಆ ಅರಣ್ಯಗಾನದಲ್ಲಿ ಅರಣ್ಯಕಪರ್ವದಲ್ಲಿ ನಿರ್ದಿಷ್ಟವಾದ ಮಂತ್ರಗಳಿವೆ. ವಾಹಗಾನ ಮತ್ತು ಊಹ್ಯಗಾನಗಳು ಉತ್ತರಾರ್ಚಿ ಕದಲ್ಲಿ ಬಣ್ಣಿಸಿರುವ ಮಂತ್ರಗಳ ಆಧಾರದ ಮೇಲೆ ಬರೆಯಲ್ಪಟ್ಟಿದೆ. ಭಿನ್ನ ಭಿನ್ನ ಸಾಖೆಗಳಲ್ಲಿ ಇದರ ಸಂಖ್ಯೆಯೂ ಭಿನ್ನ ಭಿನ್ನವಾಗಿದೆ. ಕಾಥುಮಿಯ ಗಾನದಲ್ಲಿ ೨೭೨೨ ಗಾನಗಳು ಜೈಮಿನೀಯ ಗಾನ ದಲ್ಲಿ ೩೬೮೧ ಗಾನಗಳು ಅಡಗಿವೆ.

ಸಾಮಗಾನವು ಸಪ್ತಸ್ವರಗಳ ಆಧಾರದ ಮೇಲೆ ನಿಂತಿದೆ. ಇವರಲ್ಲಿ ೭ ಸ್ವರಗಳು ೩ ಗ್ರಾಮಗಳು ೨೧ ಮೂರ್ಛನೆಗಳು ಮತ್ತು ೪೯ ತಾನಗಳಿವೆ.

ಸಾಮ ಎಂಬುದು ರೂಢಿ ಶಬ್ದ, ಅದರ ಅರ್ಥ ಗಾನ ಅಥವಾ ಗೀತ ಎಂದು. ಗಾಯತ್ರಿ ಮುಂತಾದ ಛಂದಸ್ಸುಗಳಲ್ಲಿ ಸಾಮಗಾನವಿದೆ.

ಸಾಮಗಾನದ ಪದ್ಧತಿ ಬಹಳ ಕಠಿಣವಾದುದು, ಇದರ ಗಾಯನ ಮಾಡಲು ಸೂಕ್ಷ್ಮ ಅಧ್ಯಯನ ಮಾಡಬೇಕಾಗಿ ಬರುತ್ತದೆ. ಸಾಧಾರಣವಾಗಿ ನಮ್ಮಂತಹವರು ಇಷ್ಟು ಅರ್ಥಮಾಡಿಕೊಂಡರೆ ಸಾಕು. ಸಾಮಗಾನದಲ್ಲಿ ೫ ಭಾಗಗಳಿವೆ.

೧. ಪ್ರಸ್ತಾವ : ಇದು ಮಂತ್ರದ ಆರಂಭಭಾಗ. ಹುಂ ಯಿಂದ ಪ್ರಾರಂಭವಾಗುತ್ತದೆ. ಪ್ರಸ್ತೋತ ಎಂಬ ಋತ್ವಿಜನು ಹಾಡುತ್ತಾನೆ.

೨. ಉದ್ಗೀಥ : ಇದನ್ನು ಹಾಡುವವನು ಉದ್ಗಾಥ, ಇದರ ಪ್ರಾರಂಭವು ಓಂ ಯಿಂದ ಶುರು ವಾಗುತ್ತದೆ.

೩. ಪ್ರತಿಹಾರ : ಅಂದರೇ ೨ ಜೋಡಿಸುವುದು ಎಂದರ್ಥ. ಪ್ರತಿಹರ್ಷ ಎಂಬ ಋತ್ವಿಜನು ಇದರ ಗಾಯನ ಮಾಡುತ್ತಾನೆ. ಇದನ್ನು ೨ ಭಾಗ ಮಾಡಿ ಇಬ್ಬರು ಹಾಡುವ ಪದ್ಧತಿ ಉಂಟು.

೪. ಉಪದ್ರವ : ಇದನ್ನು - ಉದ್ಗಾಥ ಹಾಡುತ್ತಾನೆ.

೫. ನಿಧನ : ಈ ಮಂತ್ರದ ಅಂತಿಮವಾದ ೨ ಶಬ್ದಾಂಶಗಳು ಅಥವಾ ಓಂ ಇರುತ್ತದೆ. ಇದರ ಗಾಯನವನ್ನು ಪ್ರಸ್ತೋತ, ಉದ್ಗಾಥ ಪ್ರತಿಹರ್ಷ ಮೂವರೂ ಸೇರಿ ಒಟ್ಟಿಗೆ ಮಾಡುತ್ತಾರೆ.

ಸಾಮಗಾನವನ್ನು ೩ ಬಾರಿ ಹಾಡಿದರೆ ಸ್ತೋಮ ಎಂದು ಹೇಳುತ್ತಾರೆ. ಹಾಡುವಾಗ ಸ್ವರಗಳನ್ನು ಒಂದೆಡೆ ಹ್ರಸ್ವ ಮಾಡಿದರೆ ಮತ್ತೊಂದು ಕಡೆ ವಿಕೃತಿ ಮಾಡುತ್ತಾರೆ. ಬೇರೊಂದು ಕಡೆ ಪರಿವರ್ತನ ಮಾಡುತ್ತಾರೆ. ಉದಾಹರಣೆಗೆ ಅಗ್ನಿ ಎಂಬ ಶಬ್ದವು "ಓಗ್ನಾಯ" ಎಂದು ಪರಿವರ್ತಿಸುತ್ತಾರೆ. ಗಾಯನದ ಪೂರ್ತಿಯನ್ನು ಮಾಡಲು ನಿರರ್ಥಕ ಶಬ್ದಗಳನ್ನು ಜೋಡಿಸುತ್ತಾರೆ. ಉದಾಹರಣೆಗೆ ಹೌ, ಜೌ, ವಾ, ಹಾ, ಮುಂತಾದವುಗಳು ಇದನ್ನೇಸ್ತೋಮ ಎಂದು ಹೇಳುತ್ತಾರೆ.

ಛಾಂದೋಗ್ಯೋಪನಿಷತ್ತಿನ ಪ್ರಕಾರ ಸಾಮಗಾನವು ೭ ವಿಧವಾಗಿದೆ. ಅವುಗಳು ಹಿಂಕಾರ, ಪ್ರಸ್ತಾವ, ಆದಿ, ಉದ್ಗೀಥ, ಪ್ರತೀಹಾರ, ಉಪದ್ರವ ಮತ್ತು ನಿಧನ ಮೇಲೆ ಹೇಳಲ್ಪಟ್ಟ ೫ ವಿಧಗಳೇ ಅವಾಂತರ ಭೇದದಿಂದ ೭ ವಿಧವಾಗುತ್ತವೆ. ಹೀಗೆ ಸಾಮಗಾನವು ಸಂಗೀತ ಶಾಸ್ತ್ರವೆಂದು ಪರಿಗಣಿಸಲ್ಪಟ್ಟಿದೆ

## ೪. ಅಥರ್ವ ವೇದ

ಅಥರ್ವವೇದವು ಉಳಿದ ೩ ವೇದಕ್ಕಿಂತ ವಿಲಕ್ಷಣವಾದದ್ದು, ಮೊದಲನೇ ೩ ವೇದಗಳಲ್ಲಿ ಇರುವ ಮಂತ್ರಗಳು ಸ್ವರ್ಗಲೋಕವನ್ನು ಪಡೆಯುವುದಕ್ಕೆ ಸಂಬಂಧಪಟ್ಟ ವಿಷಯಗಳನ್ನು ತಿಳಿದುಕೊಳ್ಳಲು ಆಧಾರಭೂತವಾಗಿದೆ. ಆದರೆ ಅಥರ್ವವೇದವು ಇಹಲೋಕಕ್ಕೆ ಸಂಬಂಧಪಟ್ಟಿದ್ದು, ಇದರಲ್ಲಿ ಸ್ವರಕ್ಷಣೆ ದೀರ್ಘಕಾಲ ಜೀವನ, ಕುಟುಂಬದಲ್ಲಿ ಐಕ್ಯತೆ ಮತ್ತು ಸುಖ ಪಡೆಯುವ ವಿಷಯಗಳನ್ನು ಒಳಗೊಂಡಿದೆ. ಇದರ ರುಚಾಗಳು ಭೂತಪ್ರೇತಗಳನ್ನು, ದುಷ್ಟ ಆತ್ಮಗಳನ್ನು ದೂರ ಮಾಡುವುದಕ್ಕೆ ಮತ್ತೆ ಅವುಗಳ ದುಷ್ಪ್ರಭಾವದಿಂದ ದೂರ ಇರಲು ಮತ್ತು ಅವುಗಳನ್ನು ನಷ್ಟಮಾಡಲು ಉಪಾಯ ತಿಳಿಸುವ ಮಂತ್ರಗಳಿಂದ ಕೂಡಿದೆ. ಋಗ್ವೇದದಂತೆ ಈ ಮಂತ್ರಗಳಲ್ಲೂ ದಾರ್ಶನಿಕ ವಿಚಾರಗಳು ಇದ್ದರೂ, ಲೌಕಿಕ ಸುಖಕ್ಕೆ ಹೆಚ್ಚು ಮಹತ್ವಕೊಡಲಾಗಿದೆ. ಬಹಳ ದಿನದವರೆಗೂ ಇದಕ್ಕೆ ವೇದದ ಸ್ಥಾನ ದೊರಕಿರಲಿಲ್ಲ, ವೇದತ್ರಯೀ ಎಂದು ಮೊದಲನೇ ಮೂರು ವೇದಗಳಿಗೆ ಮಾತ್ರ ಅದ್ಯತೆ ಇತ್ತು. ಕಾಲಕಳೆದಂತೆ ಇದನ್ನು ವೇದಗಳೊಂದಿಗೆ ಸೇರಿಸಿ ವೇದಗಳು ೪ ಎಂದು ಪರಿಗಣಿಸಲಾಯಿತು.

ಬ್ರಹ್ಮನ ಸಾಕ್ಷಾತ್ಕಾರದ ನೇರವಾದ ಸಂಬಂಧ ಈ ವೇದದಿಂದ ದೊರಕುತ್ತದೆ. ಬ್ರಹ್ಮಾ ಎಂಬ ಋತ್ವಿಜನು ಯಜ್ಞದ ಅಧ್ಯಕ್ಷನಾಗುತ್ತಾನೆ. ಯಾಗವನ್ನು ನಡೆಸುವ ಹೊಣೆ ಅವನದ್ದೇ ಆಗಿರುತ್ತದೆ. ಅವನು ಬೇರೆಯವರು ಮಾಡುವ ತಪ್ಪುಗಳನ್ನು ತಿದ್ದಿ ಸರಿಪಡಿಸುತ್ತಾನೆ. ಈ ಬ್ರಹ್ಮ ಎಂಬ ಋತ್ವಿಜನು ೪ ವೇದಗಳಲ್ಲೂ ಪ್ರಕಾಂಡ ಪಂಡಿತನಾಗಿರುತ್ತಾನೆ. ಬ್ರಾಹ್ಮಣಗಳಲ್ಲಿ ಇವನ ಮಹಿಮೆಯನ್ನು ಕೊಂಡಾಡಿದ್ದಾರೆ. ಗೋಪಥಬ್ರಾಹ್ಮಣದಲ್ಲಿ ಮೊದಲನೇ ಮೂರು ವೇದಗಳು ಒಂದು ಲಕ್ಷದ ಸಂಸ್ಕಾರವನ್ನು ಮಾಡುತ್ತಾನೆ ಎಂದು ಹೇಳುತ್ತದೆ. ಐತರೇಯ ಬ್ರಾಹ್ಮಣದಲ್ಲಿ ಯಾಗದ ೨ ಮಾರ್ಗಗಳಿವೆ. ಒಂದು 'ವಾಕ್' ಎಂದರೆ ಮತ್ತೊಂದು ಮನಸ್ಸು. ವಾಕ್ ಎಂದರೆ ವಚನ, ವಚನದ ಮೂಲಕ ೩ ವೇದಗಳ ಪಕ್ಷವು ಸಂಸ್ಕಾರವನ್ನು ಪಡೆಯುತ್ತದೆ ಎಂದರೇ ಮನಸ್ಸಿನಿಂದ ೨ನೇ ಪಕ್ಷ ಸಂಸ್ಕಾರವನ್ನು ಪಡೆಯುತ್ತದೆ. ಇದರಿಂದ ಅಥರ್ವವೇದದ ಹಿರಿಮೆ ನಮಗೆ ಅರ್ಥವಾಗುತ್ತದೆ. ಆದುದರಿಂದ ಯಜ್ಞಗಳಿಂದ ಅಥರ್ವ ವೇದಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡಲಾಗಿದೆ. ರಾಜನ ಶಾಂತಿ ಮತ್ತು ಪಾಷ್ಟಿಕ ಕಾರ್ಯಗಳನ್ನು ಯಜ್ಞದ ಮೂಲಕವೇ ಅಥರ್ವವೇದವು ಪೂರೈಸುತ್ತದೆ. ಆದುದರಿಂದ ಪುರೋಹಿತನಿಗೆ ಅಥರ್ವವೇದವು ಬಹಳ ಮುಖ್ಯ. ಅಥರ್ವವೇದವನ್ನು ಬ್ರಹ್ಮವೇದ, ಅಂಗೀರೋವೇದ ಅಥರ್ವಾಂಗೀರವೇದ ಎಂದು ಕರೆಯುತ್ತಾರೆ. ಅಥರ್ವ ಎಂಬ ಶಬ್ದದ ಅರ್ಥ ವ್ಯಾಖ್ಯೆ ಮತ್ತು ನಿರ್ವಚನ ಎಂದು ನಿರುಕ್ತದಲ್ಲೂ ಗೋಪಥ ಬ್ರಾಹ್ಮಣದಲ್ಲೂ ಕೊಡಲ್ಪಟ್ಟಿದೆ. ಥರ್ವ, ಧಾತು ಕೌಟಿಲ್ಯ ಮತ್ತು ಹಿಂಸಾವಾಚಿ - ಇದರ ಅರ್ಥ ಕುಟಿಲತೆಯಿಲ್ಲದ್ದು, ಅಹಿಂಸೆಯ ಮೂಲಕ ಸ್ಥಿರತೆಯನ್ನು ಪಡೆಯುವ ವ್ಯಕ್ತಿ. - ಈ ವೇದದಲ್ಲಿ ಬ್ರಹ್ಮನನ್ನು ಪಡೆಯುವಂತಹ ಮಂತ್ರಗಳನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಅಥರ್ವಣವು ಅಂಗೀರಸ ಋಷಿಗಳ ಮೂಲಕ ಇಷ್ಟವಾದುದು ಎಂದು ಪರಿಗಣಿಸಲ್ಪಟ್ಟಿದೆ. 'ಅವೆಸ್ತಾ' ಶಬ್ದದ 'ಅತ್ರವನ್' ಶಬ್ದದ 'ಅತರ್ವನ್' ಎಂದು ಹೇಳುತ್ತಾರೆ. ಇದರ ಸಾಮಾನ್ಯ ಅರ್ಥ ಋತ್ವಿಜನು ಎಂದು ಹೇಳುತ್ತಾರೆ. ಋತ್ವಿಜನು ಅಗ್ನಿಯ ಉಪಾಸನೆಯನ್ನು ಪೂಜೆಯನ್ನು ಮಾಡುವ ವ್ಯಕ್ತಿ. ಮಾರಣ ಮಂತ್ರಗಳನ್ನು, ಮಾಟವನ್ನು ಮಾಡುವ ಅರ್ಥದಲ್ಲಿ ಅಥರ್ವ ಶಬ್ದಪ್ರಯೋಗದಲ್ಲಿದೆ. ಅಂಗೀರಸವೆಂದರೆ ಅಭಿಸಾರಮಂತ್ರ, ಇದರ ಪ್ರಯೋಗವನ್ನು ಮಾರಣ ಮತ್ತು ಮೋಹನ ಕ್ರಿಯೆಗಳಲ್ಲಿ ಉಪಯೋಗಿಸುತ್ತಾರೆ. ಇದರಲ್ಲಿ ರೋಗಗಳನ್ನು ದೂರ ಮಾಡುವ ಮಂತ್ರಗಳೊಂದಿಗೆ ಶತ್ರುಗಳನ್ನು, ಪ್ರತಿಪಕ್ಷಿಗಳನ್ನೂ ನಮಗೆ ವಿರುದ್ಧವಾಗಿ ಕೆಲಸ ಮಾಡುವವರನ್ನು ನಮ್ಮಕಡೆಗೆ ಒಲಿಸಿಕೊಳ್ಳುವ ರೀತಿ ಮತ್ತು ಅವರನ್ನು ಸೇಡು ತೀರಿಸಿಕೊಳ್ಳುವ ಪ್ರತೀಕಾರ ಕ್ರಿಯೆಗಳನ್ನು ಮಾಡುವ ಮಂತ್ರಗಳು ಸೇರಿವೆ. ವೇದವ್ಯಾಸರು ಇದನ್ನು ಸುಮಂತನಿಗೆ ಬೋಧಿಸಿದರು. ಭಾಗವತದಲ್ಲಿ ಅಭಿಚಾರಪ್ರಧಾನವಾದ ವೇದ ಎಂದು ಸುಮಂತನನ್ನು ದಾರುಣ ಮುನಿ ಎಂದು ಹೇಳಲ್ಪಟ್ಟಿದೆ. ಸುಮಂತನು ೨ ಸಂಹಿತೆಗಳನ್ನು ತನ್ನ ಶಿಷ್ಯ ಕಬಂಧನಿಗೆ ಹೇಳಿಕೊಟ್ಟರು. ಕಬಂಧನ ೨ ಪಟ್ಟ ಶಿಷ್ಯರು ಪಥ್ಯ ಮತ್ತು ದೇವದರ್ಶ. ಪಥ್ಯನಿಗೆ ೩ ಶಿಷ್ಯರಿದ್ದರು. ಜಾಜಲಿ, ಕುಮುದ ಮತ್ತು ಶೌಸಕ. ದೇವದರ್ಶನಿಗೆ ೪ ಶಿಷ್ಯರಿದ್ದರು. ಮೋದ, ಬ್ರಹ್ಮಬಲಿ, ಪಿಪ್ಪಲಾದ ಮತ್ತು ಸೌಕ್ಲಾಯನಿ, ಈ ಋಷಿಗಳ ಮೂಲಕವೇ ಅಥರ್ವವೇದವು ಪ್ರಚಾರಕ್ಕೆ ಬಂದಿತು ಎಂದು ಹೇಳುತ್ತಾರೆ. ಪತಂಜಲಿಯು ಈ ವೇದಕ್ಕೆ ೯ ಶಾಖೆಗಳಿವೆ ಎಂದು ಹೇಳಿದ್ದಾರೆ.

೧. ಪಿಪ್ಪಲಾದ : ಪಿಪ್ಪಲಾದ ಮುನಿ ಆಧ್ಯಾತ್ಮ ಶಾಸ್ತ್ರದ ಪಾರಂಗತ ಪಂಡಿತನಾಗಿದ್ದ. ತನ್ನ ಆಧ್ಯಾತ್ಮಿಕ ವಿಷಯಗಳ ಸಂದೇಹವನ್ನು ನಿವಾರಿಸಲೆಂದೇ ಸುಕೇಶಾ, ಭಾರದ್ವಾಜ ಮುಂತಾದ ೬ ಋಷಿಗಳು ಇವರಲ್ಲಿಗೆ ಬಂದರೆಂದು ಅವರು ಕೇಳಿದ ಪ್ರಶ್ನೆಗಳಿಗೆ ಉತ್ತರವಾಗಿ ಇದನ್ನು ಕೊಟ್ಟನೆಂದು ಹೇಳುತ್ತಾರೆ. ಇವರ ೨ ಗ್ರಂಥಗಳು ಪ್ರಸಿದ್ಧವಾದವು ಪ್ರಪಂಚಹೃದಯ ಎಂಬ ಗ್ರಂಥದಲ್ಲಿ ಪಿಪ್ಪಲಾದನ ಶಾಖೆಯ ಸಂಹಿತೆಯ ೨೦ ಕಾಂಡಗಳಿವೆ. ಎಂದೂ ಬ್ರಾಹ್ಮಣದಲ್ಲಿ ೮ ಅಧ್ಯಾಯವಿದೆ ಎಂದೂ ಹೇಳಿದ್ದಾರೆ. ಈ ಸಹಿಂತೆಯ ಪ್ರತಿ 'ಶಾರದಾ' ಲಿಪಿಯಲ್ಲಿ ಕಾಶ್ಮೀರದಲ್ಲಿ ಸಿಕ್ಕಿದೆ. ಇದನ್ನು ಕಾಶ್ಮೀರ ನರೇಶನು ಜರ್ಮನ್ ಡಾ|| ರಾತ್‌ಗೆ ೧೮೭೫ ರಲ್ಲಿ ಪುರಸ್ಕಾರವಾಗಿ ಕೊಟ್ಟನೆಂದು ಪ್ರತೀತಿ. ಈ ಪ್ರತಿಯ ಫೋಟೋ ಸ್ಟಾಟ್ ಪ್ರತಿಯನ್ನು ದೊಡ್ಡ ದೊಡ್ಡ ೩ ಪುಸ್ತಕಗಳಾಗಿ ೧೯೦೧ ರಲ್ಲಿ ಅಮೇರಿಕಾದವರು ಪ್ರಕಟ ಪಡಿಸಿದ್ದಾರೆ. ಇದರಿಂದಲೇ ನಮಗೆ ಇದರ ಮಹತ್ವ ನಮಗೆ ಅರಿವಾಗುತ್ತದೆ.

೨. ಮೌದ : ಮಹಾಭಾಷ್ಯ ಮತ್ತು ಶ್ಬಾವರ ಭಾಷ್ಯದಲ್ಲಿ ಇವರ ಸುದ್ದಿಸಿಗುತ್ತದೆ. ಮೌದ ಮತ್ತು ಜಲದ ಶಾಖೆಯ ಪುರೋಹಿತರನ್ನು ರಾಷ್ಟ್ರದಲ್ಲಿಟ್ಟುಕೊಂಡರೆ ರಾಷ್ಟ್ರ ನಾಶವಾಗುತ್ತದೆ ಎಂದು ಭಾವಿಸುತ್ತಾರೆ ಅಂದರೆ ಕೆಟ್ಟದ್ದನ್ನೇ ಮಾಡುವ ಶಾಸ್ತ್ರವಾಗಿದೆ.

೩. ಕೌನಕ : ಈ ಸಂಹಿತೆಯು ಮತ್ತು ಗೋಪಥ ಬ್ರಾಹ್ಮಣ ಈ ಶಾಖೆಯದು ಚಾರಣ ವೈದ್ಯರ ವಿಷಯವಾಗಿ, ಕೌಶಿಕ ಸೂತ್ರದ ವ್ಯಾಖ್ಯೆ ದೊರಕುತ್ತದೆ. ವಾಯು ಪುರಾಣದಲ್ಲಿ ಈ ಶಾಖೆಯಲ್ಲಿ ೬೦೨೬ ಮಂತ್ರಗಳಿದ್ದವು ಎಂದು ಗೊತ್ತಾಗುತ್ತದೆ. ಆದರೆ ಇದು ನಮಗೆ ದೊರಕಿಲ್ಲ.

ಅಥರ್ವವೇದದಲ್ಲಿ ೨೦ ಕಾಂಡಗಳು, ೬೩೧ ಸೂತ್ರಗಳು, ೫೯೮೭ ಮಂತ್ರಗಳು ಸಂಗ್ರಹವಾಗಿವೆ. ಒಂದು ವಿಶಿಷ್ಟ ಉದ್ದೇಶವನ್ನು ಇಟ್ಟು ಈ ಮಂತ್ರಗಳ ಸಂಕಲನೆ ಮಾಡಿದೆಯೆಂದು ಮೀಮಾಂಸಕಾರರು ಹೇಳುತ್ತಾರೆ. ಆರಂಭದ ೭ ಕಾಂಡಗಳಲ್ಲಿ ಪುಟ್ಟಪುಟ್ಟ ಸೂತ್ರಗಳಿವೆ. ಪ್ರಥಮಕಾಂಡದಲ್ಲಿ ೪ ಮಂತ್ರಗಳು, ದ್ವಿತೀಯದಲ್ಲಿ ೫ ಮಂತ್ರಗಳು, ತೃತೀಯದಲ್ಲಿ ೬ ಮಂತ್ರಗಳು, ಚತುರ್ಥದಲ್ಲಿ ೭ ಮಂತ್ರ ಪಂಚಮದಲ್ಲಿ ೮ ಮಂತ್ರಗಳಿವೆ. ೬ ನೇ ಕಾಂಡದಲ್ಲಿ ೧೪೨ ಸೂಕ್ತಗಳು ಪ್ರತಿಯೊಂದು ಸೂಕ್ತದಲ್ಲೂ ೧೦೦ ಮಂತ್ರಗಳಿಗೆ ಕಡಿಮೆಯಿಲ್ಲದೆ. ಇದೆ ೭ ನೇಯದರಲ್ಲಿ ೧೧೮ ಸೂಕ್ತಿಗಳು. ಒಂದೊಂದು ಸೂಕ್ತದಲ್ಲೂ ೧೧೨ ಮಂತ್ರಗಳಿವೆ. ೮ ರಿಂದ ೧೨ ನೇ ಕಾಂಡದವರೆಗೆ ದೊಡ್ಡ ದೊಡ್ಡ ಸೂಕ್ತಗಳಿವೆ. ಬೇರೆ ಬೇರೆ ವಿಷಯಗಳಾಗಿವೆ. ೧೩ ರಿಂದ ೧೮ ರವರೆಗೆ ಏಕತೆ ಕಂಡುಬರುತ್ತದೆ. ೧೨ ನೇ ಕಾಂಡದಲ್ಲಿ ಪೃಥ್ವಿಸೂಕ್ತದಲ್ಲಿ ೬೩ ಮಂತ್ರಗಳಿವೆ. ಅದರಲ್ಲಿ ರಾಜನೀತಿಕ, ಭೌಗೋಳಿಕ ಸಿದ್ಧಾಂತಗಳು ಅತ್ಯಂತ ಆಕರ್ಷಕ ಶೈಲಿಯಲ್ಲಿ ಪ್ರಸ್ತುತಪಡಿಸಿದೆ. ೩ನೇ ಕಾಂಡದಲ್ಲಿ ಆಧ್ಯಾತ್ಮಿಕಕ್ಕೆ ಸಂಬಂಧಪಟ್ಟ ವಿಷಯ. ೧೪ನೇ ಕಾಂಡದಲ್ಲಿ ವಿವಾಹದ ಪ್ರಾಧಾನ್ಯ ಕುರಿತ ಮಂತ್ರಗಳಿವೆ. ೧೬ನೇ ಕಾಂಡದಲ್ಲಿ ದುಃಸ್ವಪ್ನಗಳನ್ನು ನಾಶ ಮಾಡುವ ಮಂತ್ರಗಳಿವೆ. ೧೭ನೇ ಕಾಂಡದಲ್ಲಿ ಅಭ್ಯುದಯದ ಪ್ರಾರ್ಥನೆಯಿದೆ. ೧೮ನೇ ಕಾಂಡ ಶ್ರಾದ್ಧ ಕಾಂಡ ಇದರಲ್ಲಿ ಪಿತೃಮೇಧಕ್ಕೆ ಸಂಬಂಧಪಟ್ಟ ಮಂತ್ರಗಳಿವೆ. ಕೊನೆ ೨ ಕಾಂಡಗಳಲ್ಲಿ ವೈದ್ಯಕ್ಕೆ ಸಂಬಂಧಪಟ್ಟ, ರಾಷ್ಟ್ರವೃದ್ಧಿಗೆ ಮತ್ತು ಆಧ್ಯಾತ್ಮವಿಷಯಕ್ಕೆ ಸಂಬಂಧಪಟ್ಟ ಮಂತ್ರಗಳ ಸಂಗ್ರಹವಿದೆ. ಅಥರ್ವ ವೇದದ $\frac{1}{6}$ ಭಾಗ ಎಂದರೆ ೧೨೦೦ ಮಂತ್ರಗಳು ಋಗ್ವೇದದಿಂದ ತೆಗೆದುಕೊಳ್ಳಲ್ಪಟ್ಟಿದೆ. ಅಥರ್ವವೇದದಲ್ಲಿ ವಿಜ್ಞಾನಕ್ಕೆ ಸಂಬಂಧಪಟ್ಟ ಅಂಶಗಳು ಕಂಡುಬರುತ್ತವೆ.

## ಅಥರ್ವದಲ್ಲಿ ವಿಜ್ಞಾನ

ಅಥರ್ವವೇದದಲ್ಲಿ ಆಯುರ್ವೇದ ಸಿದ್ಧಾಂತ ಮತ್ತು ವ್ಯವಹಾರಕ್ಕೆ ಸಂಬಂಧಪಟ್ಟ ಕುತೂಹಲ ವರ್ಧಕ ವಿಷಯಗಳು ಸಂಗ್ರಹವಾಗಿವೆ. ಶಾರೀರಿಕ ಪ್ರತೀಕಾರ ಮತ್ತು ಔಷಧಿಗಳ ವಿಷಯದಲ್ಲಿ ಅನೇಕ ಉಪಯೋಗವುಳ್ಳ ವೈಜ್ಞಾನಿಕ ತಥ್ಯಗಳು ಕಂಡುಬರುತ್ತದೆ. ಜ್ವರ, ಜ್ವರದ ವರ್ಣನೆ ವಿಸ್ತಾರವಾಗಿ ಕೊಡಲ್ಪಟ್ಟಿದೆ. ಸತತ, ಶಾರದ, ಗ್ರೈಷ್ಮ ಶೀತ ವಾರ್ಷಿಕ ತೃತೀಯಕ ಮುಂತಾದ ಜ್ವರದ ಭೇದಗಳನ್ನು ಮಂಡಿಸಿದ್ದಾರೆ. ಎಲುಬುಗಳು ಮತ್ತು ಹೃದಯದ ಬೇನೆಗಳ ಬಗ್ಗೆ ಬಣ್ಣಿಸಿದ್ದಾರೆ. ಅಜೀರ್ಣ, ಗಂಡಮಾಲೆಯರೋಗ, ವಾತರೋಗ, ಮುಂತಾದವುಗಳ ವರ್ಣನೆಯಿದೆ. ಪ್ರತೀಕಾರದಲ್ಲಿ ಆಧುನಿಕ ಪದ್ಧತಿಯಾದ ಶಲ್ಯಚಿಕಿತ್ಸೆಯ ವರ್ಣನೆಯಿದೆ. ಮೂತ್ರಪಿಂಡದ ರೋಗಗಳು, ಸುಖಪ್ರಸವಕ್ಕೆ ಯೋನಿಭೇದನ, ಜಲಧಾವನದ ಮೂಲಕ ಗಾಯಗಳ ಉಪಚಾರ ಮುಂತಾದವುಗಳ ವರ್ಣನೆ ಬರುತ್ತದೆ. ನಾನಾ ಕ್ರಿಮಿಕೀಟಗಳಿಂದ ಉತ್ಪನ್ನವಾಗುವ ರೋಗಗಳ ಸಿದ್ಧಾಂತ ಮತ್ತು ಅದರ ಉಪಚಾರಗಳನ್ನು ಬಣ್ಣಿಸಿದ್ದಾರೆ: ಕಣ್ಣು, ಮೂಗು, ಹಲ್ಲು, ಮುಂತಾದವುಗಳಲ್ಲಿ ರೋಗಗಳನ್ನು ಉತ್ಪತ್ತಿಮಾಡುವ ಕ್ರಿಮಿಗಳ ವರ್ಣನೆಮಾಡಿ ಅವುಗಳನ್ನು ಕೊಲ್ಲುವ ಉಪಾಯವನ್ನು ಸೂರ್ಯಕಿರಣದ ಮೂಲಕ ಕೊಲ್ಲುವ ದಾರಿಯನ್ನು ವೈಜ್ಞಾನಿಕ ರೀತಿಯಲ್ಲಿ ವಿಷಯಗಳು ಕೊಡಲ್ಪಟ್ಟಿದೆ. ನಾನಾ ಔಷಧಿಗಳ ಮಣಿಗಳ ವರ್ಣನೆಯೂ ಇದೆ. 'ವಿಷಸ್ಯ ವಿಷಮೌಷಧಂ' ಎಂಬುದು ಅಥರ್ವವೇದದ ಮಂತ್ರ ಕ್ಯಾನ್ಸರ್ ಮುಂತಾದ ರೋಗಗಳಿಗೆ ವಿಷವನ್ನು ಔಷಧಿಯಾಗಿ ಕೊಡುವ ಪದ್ಧತಿ ಕಂಡುಬರುತ್ತದೆ.

ಭೌತಿಕ ವಿಜ್ಞಾನದ ತಥ್ಯಗಳು ಸಹ ಅಥರ್ವವೇದದಲ್ಲಿದೆ. ಈ ಮಂತ್ರಗಳ ಸಾರ್ಥಕತೆಯನ್ನು ಪರೀಕ್ಷಿಸಬೇಕಾದರೆ ವೈದ್ಯನಿಗೆ ಸಂಸ್ಕೃತದ ಅರಿವು ಇರಬೇಕು. ಗೂಢರಹಸ್ಯವಾದ ಮಂತ್ರಗಳ ಅರ್ಥವನ್ನು ಬಿಡಿಸಿ ಹೇಳುವುದಕ್ಕೆ ವೈದ್ಯಶಾಸ್ತ್ರದ ತಜ್ಞರೇ ಬೇಕಾಗುತ್ತಾರೆ. ಹೀಗೆ ಅಥರ್ವವೇದದಲ್ಲಿ ವೈದ್ಯಕೀಯ ಸೂಕ್ತಿಗಳು, ಆಯುಷ್ಯದ ಸೂಕ್ತಿಗಳು, ಪೌಷ್ಟಿಕ ವಸ್ತುಗಳ ಸೂಕ್ತಿಗಳು, ಉಪಚಾರದ ಸೂಕ್ತಿಗಳು, ವಿವಾಹ ಪುತ್ರೋತ್ಪತ್ತಿಯ ಸೂಕ್ತಿಗಳು, ರಾಜಕೀಯಕ್ಕೆ ಸಂಬಂಧಪಟ್ಟ ಸೂಕ್ತಿಗಳು ಭೂಮಿ ಸೂಕ್ತಿಗಳು, ಬ್ರಹ್ಮಜ್ಞಾನಿ ಸೂಕ್ತಿಗಳು ಕಂಡುಬರುತ್ತವೆ. ಕಾವ್ಯದ ದೃಷ್ಟಿಯಿಂದ ಅಥರ್ವವೇದವು ಋಗ್ವೇದದ ಪೂರಕವಾಗಿದೆ.

ಹೀಗೆ ವೇದಗಳ ಮಹತ್ವ ನಮಗೆ ಕಂಡುಬರುತ್ತದೆ. ಭರತನಾಟ್ಯಶಾಸ್ತ್ರದಲ್ಲಿ ಈ ವೇದಗಳ ತಿರುಳುಗಳನ್ನೇ ತೆಗೆದುಕೊಂಡು ಪಂಚಯವೇದವಾದ ನಾಟ್ಯಶಾಸ್ತ್ರವನ್ನು ಬರೆದ ಸಂಗತಿ ನಮಗೆ ಗೊತ್ತಾಗುತ್ತದೆ. ಋಗ್ವೇದದಿಂದ ವಾರ್ತಾಲಾಪಗಳು, ಸಾಮವೇದದಿಂದ ಸಂಗೀತ, ಯಜುರ್ವೇದದಿಂದ ಅಭಿನಯ ಮತ್ತು ಅಥರ್ವವೇದದಿಂದ ರಸ ತೆಗೆದುಕೊಂಡು ನಾಟ್ಯ ಶಾಸ್ತ್ರವನ್ನು ರಚಿಸಿದರೆಂದು ಮತ್ತು ಅದರ ಜೊತೆ ಶಿಲ್ಪ, ಚಿತ್ರ, ಸಾಪತ್ಯಕಲೆ, ಮುಂತಾದವುಗಳನ್ನು ಸೇರಿಸಿ ರಂಗಮಂಟಪದಲ್ಲಿ ನಾಟಕವನ್ನು ಪ್ರಸ್ತುತಪಡಿಸಿದರೆಂದು ಹೇಳಲ್ಪಟ್ಟಿದೆ.

ವೇದಾಂಗ : ಸನಾತನ ಧರ್ಮಿಗಳು ವೇದಾಂಗಗಳನ್ನು ವೇದಗಳ ಅನುಪೂರಕ ಗ್ರಂಥವೆಂದು ಹೇಳುತ್ತಾರೆ. ಅವುಗಳು ಬ್ರಾಹ್ಮಣ ಗ್ರಂಥ, ಅರಣ್ಯ ಸೂತ್ರಗಳು, ಗುಹ್ಯ ಸೂತ್ರ, ಶೌತ್ರ ಮತ್ತು ಬ್ರಹ್ಮಸೂತ್ರ, ಪ್ರತಿಶಾಖ್ಯ, ಉಪನಿಷತ್ ಮತ್ತು ಅನುಕ್ರಮಣಿ.

ವೇದಪುರುಷನಿಗೆ ೬ ಅಂಗಗಳಿದ್ದವು, ಅದನ್ನೇ ವೇದಾಂಗ ಎಂದು ಹೇಳುತ್ತಾರೆ. ವೇದದ ಮೂಗು ಶಿಕ್ಷಣ, ಮುಖ, ವ್ಯಾಕರಣ, ಕಿವಿ ನಿರುಕ್ತ, ಕೈಕಲ್ಪ, ಚರಣ ಛಂದಸ್ಸು, ನೇತ್ರ ಜ್ಯೋತಿಷ್ಯ ಎಂದು ಹೇಳುತ್ತಾರೆ.

೧. ಶಿಕ್ಷಾಗ್ರಂಥ : ಇದರಲ್ಲಿ ಸ್ವರ ಮತ್ತು ವ್ಯಂಜನಗಳ ಶುದ್ಧ ಉಚ್ಚಾರಣೆ ಮತ್ತು ಮಂತ್ರಗಳ ಸ್ವರ ಅಕ್ಷರ ಮಾತ್ರೆ, ಉಚ್ಚಾರಣೆಯ ವಿವೇಚನೆಯಿದೆ, ಉಚ್ಚಾ

(ಮುಂದಿನ ಪುಟ ನೋಡಿ)

# ಕಾವ್ಯ, ಚಿತ್ರ, ಗೀತ, ನೃತ್ಯ

ಕೃಪೆ -- ವಿಕ್ರಮ -- 8-9-96.

ಬೆಂಗಳೂರಿನ ಕುವೆಂಪು ಕಲಾಕ್ಷೇತ್ರದಲ್ಲಿ ಆ. ೨೨ ರಂದು ನಡೆದ ಕಾವ್ಯ - ಚಿತ್ರ - ಗೀತ - ನೃತ್ಯ ಕಾರ್ಯಕ್ರಮವು ಈ ನಾಲ್ಕೂ ಕಲೆಗಳ ಆಶುಸ್ಫೂರ್ತಿಯ ಪ್ರದರ್ಶನದ ಮೂಲಕ ಭಾರತೀಯ ಕಲಾವೈಭವದ ಹಿರಿಮೆಯನ್ನು, ಕಲೆಯ ವಿವಿಧ ಸಾಧ್ಯತೆಗಳನ್ನು ಯಶಸ್ವಿಯಾಗಿ ಬಿಂಬಿಸಿತು.

ಪಾಶ್ಚಾತ್ಯ ಪ್ರಭಾವದಿಂದಾಗಿ ಕಲಾಪ್ರದರ್ಶನಗಳಲ್ಲಿ ವಾಣಿಜ್ಯಮೌಲ್ಯವೇ ಪ್ರಾಧಾನ್ಯವಾಗುತ್ತಿರುವ ಈ ದಿನಗಳಲ್ಲಿ, ಸಾರ್ವಜನಿಕರು ಟಿಕೆಟ್ ಖರೀದಿಯ ವ್ಯವಹಾರದಿಂದ ಮುಕ್ತರಾಗಿ ಕೇವಲ ರಸಗ್ರಹಣದ ಸಹೃದಯರಾಗಿ ಭಾಗವಹಿಸಲು ಅನುವು ಮಾಡಿಕೊಟ್ಟ ಈ ಕಾರ್ಯಕ್ರಮವು 'ಜನ, ನೈಜ ಕಲಾಮೇಳವನ್ನು ಆರಾಧಿಸುತ್ತಾರೆ' ಎಂಬ ಸತ್ಯವನ್ನೂ ತೋರಿಸಿಕೊಟ್ಟಿತು. ಯಾಕೆಂದರೆ ಕಲಾಕ್ಷೇತ್ರದ ಇತಿಹಾಸದಲ್ಲೇ ಗರಿಷ್ಠ ಸಂಖ್ಯೆಯಲ್ಲಿ ಬಂದಿದ್ದ ಜನ ಒಳಗೆ ಜಾಗಸಿಗದೇ ಖುದ್ದಾಗಿ ಕಾರ್ಯಕ್ರಮ ನೋಡಲಾಗಲಿಲ್ಲ ಎಂದು ಬೇಸರಿಸಿದರೇ ವಿನಃ ಸುಸಂಸ್ಕೃತ ನಡವಳಿಕೆಯನ್ನು ಬಿಟ್ಟುಕೊಡಲಿಲ್ಲ. ಸಭಾಂಗಣವು ಅಕ್ಷರಶಃ ತುಂಬಿತುಳುಕಾಡಿದ್ದು, ಹೊರಗೆ ನೇರ ದೂರದರ್ಶನ ಪ್ರಸಾರ ವ್ಯವಸ್ಥೆಯು ನಿಂತ ಸಹಸ್ರಾರು ಪ್ರೇಕ್ಷಕರಿಗೆ ಕಲಾದರ್ಶನ ನೀಡಿದ್ದು - ಇವೆಲ್ಲ ಇತಿಹಾಸ ನಿರ್ಮಿಸಿದ ಅಂಶಗಳು.

ಈ ಅಪೂರ್ವ ಕಾರ್ಯಕ್ರಮದಲ್ಲಿ ಶತಾವಧಾನಿ, ಅವಿಳಂಬ ಸರಸ್ವತಿ ಎಂದೇ ಹೆಸರಾದ ಶ್ರೀ ಆರ್. ಗಣೇಶ್ ಕವಿಯಾಗಿ, ಅಭಿನವ ರವಿವರ್ಮ ಕುಂಚಬ್ರಹ್ಮರೆನಿಸಿದ ಶ್ರೀ ಬಿ. ಕೆ. ಎಸ್. ವರ್ಮರವರು ಚಿತ್ರಕಾರರಾಗಿ, ಸಂಗೀತ ಚೂಡಾಮಣಿ ಶ್ರೀಮತಿ ನಾಗವಲ್ಲಿ ನಾಗರಾಜ್ ಗಾಯಕಿಯಾಗಿ ಮತ್ತು ಚಿತ್ರನಟ ಶ್ರೀ ಶ್ರೀಧರ್ ನೃತ್ಯಪಟುವಾಗಿ ಪಾಲ್ಗೊಂಡು ನಾಲ್ಕೂ ಕಲೆಗಳ ನಡುವಣ ಸಮರಸತೆಯನ್ನು, ಅವುಗಳ ವೈವಿಧ್ಯವನ್ನು ಅತ್ಯಂತ ದೃಶ್ಯ - ನಯನ - ಕರ್ಣ ಮನೋಹರವಾಗಿ ಪ್ರದರ್ಶಿಸಿದರು.

ಈ ನಾಲ್ವರೂ ತಂತಮ್ಮ ಕಲಾಮಾಧ್ಯಮಗಳ ಮೂಲಕ ದೇವತಾಪ್ರಾರ್ಥನೆ ಮಾಡುವುದರೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಬಳಿಕ 'ಪೃಚ್ಛಕ'ರಾಗಿ ಬಂದಿದ್ದ ಶ್ರೀ ಅ. ರಾ. ಮಿತ್ರ ಹಾಗೂ ಡಾ|| ಎಸ್. ಆರ್. ಲೀಲಾರವರು ಕವಿಗೆ ಕಾವ್ಯರಚನೆಯ ಸವಾಲೊಡ್ಡಿದರು. ಅದಕ್ಕೆ ತಕ್ಕಂತೆ ಕೂಡಲೇ ಶ್ರೀ ಗಣೇಶರಿಂದ ಕಾವ್ಯ ಮೂಡಿತು. ಅದಕ್ಕೆ ಶ್ರೀ ವರ್ಮ ಚಿತ್ರ ಬಿಡಿಸಿದರು; ಶ್ರೀಮತಿ ನಾಗವಲ್ಲಿಯವರಿಂದ ಅದೇ ಕಾವ್ಯವು ಸಂಗೀತವಾಗಿ ಹರಿಯಿತು. ಶ್ರೀ ಶ್ರೀಧರ್ ಅಲ್ಲಿಯೇ ಸಂಯೋಜಿಸಿ ರಸ-ಭಾವ-ವ್ಯಂಜಕವಾಗಿ ನರ್ತಿಸಿದರು. ಪ್ರಾರ್ಥನೆಯಾಗಿ ಶ್ರೀ ವರ್ಮರು ಕಲಾಲಕ್ಷ್ಮಿಯ ಚಿತ್ರವನ್ನು ದಾರದಲ್ಲಿ ಚಕಚಕನೆ ಮೂಡಿಸಿದ್ದರು. ಆಮೇಲಿನ ಸವಾಲುಗಳಲ್ಲಿ ಅವರು ಬಟ್ಟೆ, ತಗಡು - ಹೀಗೆ ಬೇರೆ ಬೇರೆ ವಸ್ತುಗಳ ಮೂಲಕ ಚಿತ್ರ ಬಿಡಿಸಿದ್ದೊಂದು ವಿಶೇಷ. ಹಾಗೆಯೇ ಶ್ರೀ ಗಣೇಶರು ವಿವಿಧ ಛಂದಸ್ಸುಗಳನ್ನು ಬಳಸಿದರು; ಶ್ರೀಮತಿ ನಾಗವಲ್ಲಿಯವರು ರಾಗವೈವಿಧ್ಯವನ್ನು ಪರಿಚಯಿಸಿದರು. ಶ್ರೀಧರರ ನೃತ್ಯವಂತೂ ಸದಾ ನಾವೀನ್ಯದಿಂದ ಕೂಡಿದ ಆಕರ್ಷಕ ಸಂಯೋಜನೆಗಳಾಗಿದ್ದವು.

ಪುರುಷಾರ್ಥಗಳ ಬಗ್ಗೆ ನಡೆದ ಮೊದಲ ಸುತ್ತಿನ ಪ್ರದರ್ಶನದ ನಂತರ ಕಲಾವಿದರೇ ಪರಸ್ಪರ ಸವಾಲು ಹಾಕಿಕೊಳ್ಳಲಾರಂಭಿಸಿದರು. ಮೊದಲು ಕವಿಯು ಕಾವ್ಯರಚನೆಯ ಮೂಲಕ ಸವಾಲು ಆರಂಭಿಸಿದರೆ ಆನಂತರ ಚಿತ್ರಕಾರ, ಗಾಯಕಿ, ನರ್ತಕ - ಎಲ್ಲರೂ ಒಂದೊಂದು ಸವಾಲು ಹಾಕಿದರು. ಉಳಿದವರಿಂದ ಆ ಸವಾಲಿಗೆ ತಕ್ಕಂತೆ ಕಲಾದರ್ಶನ.

ಕಾವ್ಯದ ಸಾಹಿತ್ಯದಿಂದ ಅಚ್ಚರಿಗೊಳ್ಳುತ್ತಿದ್ದಂತೆ ಚಿತ್ರದ ಸಾಕ್ಷಾತ್ಕಾರ, ಒಡನೆಯೇ ಗಾಯನದ ಝೇಂಕಾರ, ನೃತ್ಯದ ಹೊಸ ಆಯಾಮಗಳ ಆವಿಷ್ಕಾರ - ಹೀಗೆ ಇಡೀ ಕಾರ್ಯಕ್ರಮವು ಅಲೆಯಿಂದ ಅಲೆಗೆ, ಸಂಭ್ರಮದಿಂದ ಸಂಭ್ರಮಕ್ಕೆ ಸಾಗುತ್ತ ಮೂರೂವರೆ ತಾಸುಗಳ ಕಾಲ ಎಲ್ಲೂ ರಸಭಂಗವಾಗದೆ ನಡೆಯಿತು. ಹೊಸದೊಂದು 'ಚೀಸ್' ಸೃಷ್ಟಿಯಾದೊಡನೆ ಕಿವಿಗಡಚಿಕ್ಕುವ ಚಪ್ಪಾಳೆಗಳು. ಆದರೆ ಕಾರ್ಯಕ್ರಮದ ರಸಗ್ರಹಣಕ್ಕೆ ಎಲ್ಲೂ ತೊಡಕಾಗಲಿಲ್ಲ.

ಒಟ್ಟಿನಲ್ಲಿ ಕಾವ್ಯ - ಚಿತ್ರ - ಗೀತ - ನೃತ್ಯ ಕಾರ್ಯಕ್ರಮವು ಮೂಲಭೂತ ಕಲೆಗಳ ಸಮ್ಮಿಲನದ ಐತಿಹಾಸಿಕ ಕ್ಷಣವಾಯಿತೆಂಬುದು ಉತ್ಪ್ರೇಕ್ಷೆಯಲ್ಲ. ✪

---

(ಹಿಂದಿನ ಪುಟದಿಂದ)

ರಣ ಸ್ಖಲಿತವಾಗದಂತೆ ಪಾಠಭೇದಗಳು ಸುರಕ್ಷಿತವಾಗಿ ಇರಲು ಬೇಕಾದ ಉಪಾಯಗಳನ್ನು ಇದರಲ್ಲಿ ಬಣ್ಣಿಸಿದ್ದಾರೆ. ನಿರುಕ್ತಶಾಸ್ತ್ರದಲ್ಲಿ ಇದರ ವರ್ಣನೆ ಬರುತ್ತದೆ. ಹರ್ಷಚರಿತದಲ್ಲಿ ದುರ್ವಾಸ ಮುನಿಗಳು ಅಶುದ್ಧ ಉಚ್ಚಾರಣೆ ಮಾಡಿದ ಕಾರಣ ಸರಸ್ವತಿ ಉಪಹಾಸ್ಯ ಮಾಡಿದಳೆಂದು ಅದರ ಪ್ರಾಯಶ್ಚಿತ್ತವಾಗಿ ದುರ್ವಾಸರು ಮೃತ್ಯುಲೋಕಕ್ಕೆ ಬಂದರು ಎಂದು ಹೇಳಲ್ಪಟ್ಟಿದೆ. ಇದು ಭಾಷಾ ವಿಜ್ಞಾನದ ದೃಷ್ಟಿಯಿಂದ ಮಹತ್ವಪೂರ್ಣವಾದುದು.

೨. ವ್ಯಾಕರಣ : ಭಾಷೆಯ ನಿಯಮಗಳನ್ನು ಸ್ಥಿರಪಡಿಸುವುದೇ ವ್ಯಾಕರಣ, ಭಾಷೆಯನ್ನು ಶುದ್ಧವಾಗಿ ಇಟ್ಟುಕೊಳ್ಳಲು ಇದನ್ನು ರಚಿಸಿದ್ದಾರೆ, ಶಾಕಲಾಯನ ವ್ಯಾಕರಣ, ಪಾಣಿನೀಯ ವ್ಯಾಕರಣ, ಯಜುರ್ವೇದಕ್ಕೆ ಸಂಬಂಧಪಟ್ಟದ್ದಾಗಿದೆ. ಕಾತ್ಯಾಯನ ಋಷಿಯ ವಾರ್ತಿಕ, ಪತಂಜಲಿಯವರ ಮಹಾವಾರ್ತ ವ್ಯಾಕರಣದ ಪ್ರಸಿದ್ಧ ಗ್ರಂಥಗಳಾಗಿವೆ. ಇದಲ್ಲದೇ ಸಾರಸ್ವತ ವ್ಯಾಕರಣ ಕಾಮಧೇನು ವ್ಯಾಕರಣ, ಪ್ರಾಕೃತ ಪ್ರಕಾಶ, ಪ್ರಾಕೃತ ವ್ಯಾಕರಣ, ಕಲಾಪ ವ್ಯಾಕರಣ, ಮುಗ್ಧಬೋದ ಮುಂತಾದ ಅನೇಕ ವ್ಯಾಕರಣ ಗ್ರಂಥಗಳಿವೆ.

೩. ನಿರುಕ್ತ - ನಿಘಂಟು : ನಿರುಕ್ತದಲ್ಲಿ ಶಬ್ದದ ಜ್ಞಾನ ಮತ್ತು ಶಬ್ದದ ಉತ್ಪತ್ತಿ ಕೊಡಲ್ಪಟ್ಟಿದೆ. ವೇದಗಳ ಶಬ್ದಗಳ ಅರ್ಥ ತಿಳಿದುಕೊಳ್ಳಲು ಅದರ ಉತ್ಪತ್ತಿಯನ್ನು ಅರಿಯುವುದು ಅವಶ್ಯಕ. ಇದರಿಂದ ಅರ್ಥಜ್ಞಾನ ಲಭಿಸುತ್ತದೆ. ನಿರುಕ್ತವನ್ನು ಅರ್ಥಮಾಡಿಕೊಳ್ಳುವುದಕ್ಕೆ ಜ್ಞಾನಬೇಕು. ಯಾಸ್ಕಾಚಾರ್ಯರ ನಿರುಕ್ತ ಮಾತ್ರ ನಮಗೆ ದೊರಕುತ್ತದೆ. ಇದರ ಮೇಲೆ ಅನೇಕ ಭಾಷ್ಯಗಳು ಮತ್ತು ವಿವೇಚನಾ ಗ್ರಂಥಗಳು ರಚಿಸಲ್ಪಟ್ಟಿದೆ. ನಿಘಂಟನ್ನು ವೈದಿಕ ಶಬ್ದಕೋಶ ಎಂದು ಹೇಳಿದರೆ ತಪ್ಪಾಗಲಾರದು ಅದರ ಟೀಕೆಯೇ ನಿರುಕ್ತ, ನಮಗೆ ೧೦೦ ನಿಘಂಟುಗಳು ಪ್ರಾಪ್ತವಾಗಿವೆ.

೪. ಛಂದಸ್ಸು : ವೇದಮಂತ್ರಗಳು ಛಂದೋಬದ್ಧವಾಗಿದೆ. ವೇದಗಳಲ್ಲಿ ಅಡಗಿರುವ ಛಂದಸ್ಸುಗಳ ಲಕ್ಷಣಗಳನ್ನು ಕೊಡಲ್ಪಟ್ಟಿದೆ.

೫. ಜ್ಯೋತಿಷ್ಯ : ಗ್ರಹಗತಿಗಳ ಆಧಾರ, ಅದರ ಅನುಕೂಲ ಪ್ರತಿಕೂಲಜ್ಞಾನದ ಶಾಸ್ತ್ರಗ್ರಂಥವೇ ಜ್ಯೋತಿಷ್ಯ ಇದರಲ್ಲಿ ಯಜ್ಞದ ಮುಹೂರ್ತ ಯಜ್ಞ ಮಂಟಪ ರಚಿಸುವ ವಿಧಾನಗಳಬಗ್ಗೆ ಜ್ಞಾನವಿದೆ.



# ವಾರ್ತಾಲಹರಿ

## ಸ್ವಾಗತ - ವಿದಾಯ

ತಿರುಮಲ ತಿರುಪತಿ ದೇವಸ್ಥಾನಗಳ ಉದ್ಯೋಗಿಗಳ ವಿವಿಧ ಸಂಘಗಳ ಸಂಯುಕ್ತ ಆಶ್ರಯದಲ್ಲಿ ಸೆಪ್ಟಂಬರ್ 12 ರ ಗುರುವಾರದಂದು, ವರ್ಗವಾದ ಕಾರ್ಯನಿರ್ವಹಣಾಧಿಕಾರಿ ಶ್ರೀ ನಿಮ್ಮಗಡ್ಡ ರಮೇಶ ಕುಮಾರ್ ಅವರಿಗೆ ವಿದಾಯವನ್ನೂ ಹೊಸದಾಗಿ ಕಾರ್ಯನಿರ್ವಹಣಾಧಿಕಾರಿ ಪದವಿ ಬಾಧ್ಯತೆಯನ್ನು ಸ್ವೀಕರಿಸಿದ ಶ್ರೀ ಎಂ.ಕೆ.ಆರ್. ವಿನಾಯಕ್ ಅವರಿಗೆ ಸ್ವಾಗತವನ್ನೂ ಕೋರಿದ ಸಭೆ ಘನವಾಗಿ ನಡೆಯಿತು. ತಿ.ತಿ.ದೇ. ಪರಿಪಾಲನಾಕಚೇರಿಯ ಒಳಾಂಗಣದಲ್ಲಿ ನಡೆದ ಈ ಸಭೆಗೆ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಟಿ. ಸತ್ಯನಾರಾಯಣರಾವ್ ಅವರು ಅಧ್ಯಕ್ಷತೆ ವಹಿಸಿದರು.

ತಿರುಮಲೆಯಲ್ಲಿನ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರೊಡನೆ ತಿ. ತಿ. ದೇವಸ್ಥಾನಗಳ ವಿವಿಧ ಉದ್ಯೋಗಿ ಸಂಘಗಳ ನಾಯಕರು, ಪ್ರತಿನಿಧಿಗಳು ಶ್ರೀ ಸಿ. ರಮಣ, ಶ್ರೀ ಚಂದ್ರಶೇಖರ ನಾಯುಡು, ಶ್ರೀ ಚೆಂಗಾರೆಡ್ಡಿ, ಶ್ರೀ ಶ್ರೀಧರ್, ಶ್ರೀ ನರಸಿಂಹಮೂರ್ತಿ, ಶ್ರೀ ವೆಂಕಟೇಶಂ -ಮೊದಲಾದವರು ಶ್ರೀ ರಮೇಶಕುಮಾರ್ ಅವರು ತಿ. ತಿ. ದೇವಸ್ಥಾನಗಳಲ್ಲಿ ಸಲ್ಲಿಸಿದ ಸೇವೆಯನ್ನು ಕುರಿತು ಕೊಂಡಾಡಿದರು.

ಹೊಸದಾಗಿ ಕಾರ್ಯಭಾರವನ್ನು ಒಪ್ಪಿಕೊಂಡ ಕಾರ್ಯನಿರ್ವಹಣಾಧಿಕಾರಿ ಶ್ರೀ ವಿನಾಯಕ್ ವರು ಮಾತನಾಡುತ್ತ, ಭಕ್ತರಿಗೆ ಉತ್ತಮವಾದ ಸೇವೆ ಸಲ್ಲಿಸುವ ಸಮಯದಲ್ಲಿ ಅವಸರಕ್ಕೆ ತಕ್ಕಂತೆ ಸಿಬ್ಬಂದಿ ಸ್ವಲ್ಪ ತ್ಯಾಗ ಮಾಡಬೇಕಾಗಿ ಬರಬಹುದು, ಆದರೆ ಆ ಮೂಲಕ ಭಗವಂತನ ಸೇವೆಯಲ್ಲಿ ಉಂಟಾಗುವ ಶ್ರೇಷ್ಠತೆ ಪ್ರಮುಖವಾಗುತ್ತದೆಯೆಂದರು.

ಶ್ರೀ ರಮೇಶ್‌ಕುಮಾರ್ ಅವರು ತಮಗೆ ನೀಡಿದ ವಿದಾಯವನ್ನು ಸ್ವೀಕರಿಸುತ್ತ, ವಿಧಿ ನಿರ್ವಹಣೆಯಲ್ಲಿ ತಾವು ಸಾಧಿಸಿದ್ದು ಅನೇಕವೆಂಬ ತೃಪ್ತಿಯಿದೆಯೆಂದೂ, ಸಿಬ್ಬಂದಿ ಮತ್ತೂ ಹೆಚ್ಚಿನ ಸೇವಾ ಭಾವನೆಯಿಂದ ಕೆಲಸ ಮಾಡಬೇಕು ಎಂದೂ ಕರೆ ನೀಡಿದರು.



ಕಾರ್ಯನಿರ್ವಹಣಾಧಿಕಾರಿಯಾಗಿ ಪದವಿಯನ್ನು ಸ್ವೀಕರಿಸುವ ಮೊದಲು ಸ್ವಾಮಿದರ್ಶನ ಪಡೆದ ಶ್ರೀ ಎಂ. ಕೆ. ಆರ್. ವಿನಾಯಕ್ ದಂಪತಿಗಳಿಗೆ ಸ್ವಾಮಿ ಪ್ರಸಾದಗಳನ್ನು ನೀಡುತ್ತ ಜೆ. ಇ. ಓ. ಶ್ರೀ ಬಾಲಸುಬ್ರಹ್ಮಣ್ಯಂ

ಸಭೆಯಲ್ಲಿ ಮೊದಲಿಗೆ ತಿ.ತಿ.ದೇ. ಸಂಕ್ಷೇಮಾಧಿಕಾರಿ ಶ್ರೀ ರಾಮಕೃಷ್ಣಯ್ಯ ಅವರು ಸ್ವಾಗತ ಮಾಡಿದರು. ಪೌರಸಂಬಂಧಾಧಿಕಾರಿ ಶ್ರೀ ಸುಭಾಶ್ ಗೌಡ್ ಅವರು ವಂದಿಸಿದರು.

ವರ್ಗಾವಣೆಯಾದ ಶ್ರೀ ಎನ್. ರಮೇಶ್‌ಕುಮಾರ್ ಅವರಿಗೆ ಅಭಿನಂದನ ಪತ್ರವನ್ನು ನೀಡುತ್ತ ತಿ.ತಿ.ದೇ. ಕಾರ್ಮಿಕ ಸಂಘ ನಾಯಕರು ಶ್ರೀ ಸಿ. ರಮಣ. ಮಧ್ಯದಲ್ಲಿ ನೂತನ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ. ಕೆ. ಆರ್. ವಿನಾಯಕ್ ಅವರಿದ್ದಾರೆ.



# ವೈಭವದ ಬ್ರಹ್ಮೋತ್ಸವ - ವಾರ್ತಾಲಹರಿ

ಶ್ರೀ ಧಾತೃನಾಮ ಸಂವತ್ಸರದ ಭಾದ್ರಪದ ಮಾಸದ ಬಿದಿಗೆಯಿಂದ ಏಕಾದಶಿಯವರೆಗೆ ಎಂದರೆ ೧೪-೯-೯೬ ರ ಶನಿವಾರದಿಂದ ೨೩-೯-೯೬ ರ ಸೋಮವಾರದವರೆಗೆ ಹತ್ತುದಿನ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಯಶಸ್ವಿಯಾಗಿ ನಡೆಯಿತು.

ಹತ್ತುದಿನಗಳ ಕಾಲ ಕೋಲಾಹಲದಿಂದ, ಸಂಭ್ರಮದಿಂದ, ಸಾಗಿದ ಬೆಟ್ಟದೊಡೆಯನ ಬ್ರಹ್ಮೋತ್ಸವಗಳಲ್ಲಿ ಎಂದಿಗಿಂತ ಹೆಚ್ಚು ಮಂದಿ ಬರುವರೆಂದು ನಿರೀಕ್ಷಿಸಿ, ಅದಕ್ಕೆ ತಕ್ಕಂತೆ ಅಧಿಕ ಸಂದಣಿಯನ್ನು ಸ್ವಾಗತಿಸುವ ಕೆಲಸಗಳು ನಡೆದಿದ್ದವು. ದಿನವೂ ಬೆಳಗ್ಗೆ ಮಧ್ಯಾಹ್ನಗಳಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ತನ್ನ ದಿವ್ಯವಾಹನಗಳಲ್ಲಿ ಆಲಯದ ಹೊರಕ್ಕೆ ಬಂದು ನಾಲ್ಕು ಮಾಡವೀಧಿಗಳಲ್ಲಿ ಮೆರವಣಿಗೆಯಲ್ಲಿ ಬರುತ್ತಿರಲು ಅವನ ಮುಂದೆ ಹರಿದಾಸರ ಸತ್ಸಂಗತಿ ನಡೆಯುವಂತೆ ವ್ಯಾಪಕ ವ್ಯವಸ್ಥೆಯಾಗಿದ್ದಿತು. ಆನೆ, ಕುದುರೆ, ಗೋವುಗಳೊಡನೆ ಎಚ್ಚರಿಕೆಯ ಘೋಷ ಮಾಡುತ್ತ ಮುಂದೆ ಮಂಗಳ ವಾದ್ಯಗಳು ಮೊಳಗುತ್ತಿರಲು, ವೇದ ಘೋಷ, ಪ್ರಬಂಧ ಪಾಠಗಳೊಡನೆ, ದಾಸಸಾಹಿತ್ಯ ಪ್ರಾಜೆಕ್ಟ್‌ನ ಅತಿಥಿಗಳಾಗಿ ಬಂದ ಹಲವಾರು ಭಜನ ವಾದ್ಯವೃಂದ, ಉಡುಪಿಯ ವಾದ್ಯವೃಂದಗಳು ಜೊತೆಗೂಡಿರಲು, ಸುತ್ತ ಕಟ್ಟಿದ ಅಟ್ಟಣಿಗೆಗಳಲ್ಲಿ ಕಾದು ಕುಳಿತ ಭಕ್ತ ವೃಂದದವರು ಕ್ಷಣಾಕ್ಷಣವೂ ಗೋವಿಂದ ನಾಮ ಘೋಷ ಮಾಡುತ್ತಿರಲು, ದಿವ್ಯ ಆಭರಣ, ವಸ್ತ್ರ ವಿಭೂಷಣಗಳಿಂದ ಅಲಂಕೃತನಾದ ಸ್ವಾಮಿ ಹಲವು ಬಾರಿ ತನ್ನ ಪಟ್ಟದ ರಾಣಿಯರೊಡನೆಯೂ ಹಲವು ಬಾರಿ ಒಬ್ಬನೇ ಜನರು ನಯನದೃಷ್ಟಿಯನ್ನು ಹಾಸಿರಲು, ಅಲ್ಲಿ ಮೆರವಣಿಗೆಯಲ್ಲಿ ನಡೆದು ಅವರ ಅಂತರಂಗವನ್ನು ಹೊಕ್ಕು ಆನಂದವನ್ನು ನೀಡಿದ್ದು ಅನುಭವ ವೇದ್ಯವಾಗಿದ್ದಿತು.

೧೪ ರಂದು ಸಂಜೆ ಬ್ರಹ್ಮೋತ್ಸವಗಳಿಗೆ ನಾಂದಿಯಂತೆ ವಿಷ್ವಕ್ಸೇನರ ಹಿರಿತನದಲ್ಲಿ ಮೃತ್ಸಂಗ್ರಹಣ ಕಾರ್ಯ ನಡೆದು ಹದಿನೈದರಂದು ಧ್ವಜಾರೋಹಣ ನಡೆಯಿತು. ತಿ.ತಿ.ದೇ. ಆಸ್ಥಾನ ವಿದ್ವಾಂಸ ಶ್ರೀ ಮಾಡಬಾಕಂ ಶ್ರೀನಿವಾಸಭಟ್ಟರ್ ಅವರು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ. ಕೆ. ಆರ್. ವಿನಾಯಕರವರಿಗೆ ಬ್ರಹ್ಮೋತ್ಸವದ ಸಂಕಲ್ಪ ನೀಡಿ ಕಂಕಣಧಾರಣೆ ಮಾಡಿಸಿದರು.









ನಂತರ ಮಲೆಯಪ್ಪಸ್ವಾಮಿ ಶ್ರೀದೇವಿ ಭೂದೇವಿಯರೊಡನೆ ದೊಡ್ಡ ಶೇಷವಾಹನದಲ್ಲಿ ಊರಮೆರವಣಿಗೆಯಲ್ಲಿ ಬಂದು ಭಕ್ತ ಜನರನ್ನು ಆನಂದಗೊಳಿಸಿದರು. ಮಾರನೆಯದಿನ ಬೆಳಗ್ಗೆ ಚಿಕ್ಕ ಶೇಷ ವಾಹನ, ಸಂಜೆ ಹಂಸವಾಹನ, ಹೀಗೇ ಸಿಂಹ ವಾಹನ, ಮುತ್ತಿನ ಪಲ್ಲಕ್ಕಿ ವಾಹನ, ಕಲ್ಪವೃಕ್ಷವಾಹನ, ಸರ್ವಭೂಪಾಲವಾಹನಗಳಲ್ಲಿ ಹೊರ ಬಂದ ಸ್ವಾಮಿ ದಂತದ ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರದೊಡನೆ ಹೊರಬಂದು ಭಕ್ತರನ್ನು ಆನಂದಸಾಗರದಲ್ಲಿ ಅದ್ದಿದರು.



ಬ್ರಹ್ಮೋತ್ಸವದ ಮಧ್ಯದ ದಿನ ಸಂಜೆ ಗರುಡೋತ್ಸವ. ೧೮-೯-೯೬ ರಂದು ಸಂಜೆ ಆಂಧ್ರ ಪ್ರದೇಶದ ಸರ್ಕಾರದ ವತಿಯಿಂದ ಮುಖ್ಯಮಂತ್ರಿ ಶ್ರೀ ಎನ್. ಚಂದ್ರಬಾಬುನಾಯುಡು ಅವರು ಸ್ವಾಮಿಗೆ ರೇಷ್ಮೆವಸ್ತ್ರಗಳ ಕಾಣಿಕೆಯನ್ನು ನೀಡಿದರು. ಬೇಡಿ ಆಂಜನೇಯಸ್ವಾಮಿ ಗುಡಿಯ ಬಳಿಯಿಂದ ಬಂಗಾರದ ಹರಿವಾಣದಲ್ಲಿಟ್ಟ ರೇಷ್ಮೆ ವಸ್ತ್ರಗಳನ್ನು ಅವರು ತಲೆಯಮೇಲೆ ಇಟ್ಟುಕೊಂಡು ಸ್ವಾಮಿ ಆಲಯಕ್ಕೆ ಬಂದು ವಸ್ತ್ರಗಳನ್ನು ಸಮರ್ಪಿಸಿದರು. ಮದರಾಸಿನಿಂದ ಶ್ವೇತಛತ್ರಗಳನ್ನು ತಿರುಮಲೆಯಲ್ಲಿನ ಗರುಡೋತ್ಸವಕ್ಕೆಂದೇ ನಡೆದು ತರುವ ಸಂಪ್ರದಾಯವಂತೆ ತರಲಾಯಿತು. ಶ್ರೀವಿಲ್ಲಿಪುತ್ತೂರಿನಿಂದ ಶ್ರೀ ಗೋದಾದೇವಿಯ ಕಡೆಯಿಂದ ತುಲಸೀ ಮಾಲೆಗಳೂ ತತ್ಸಮಯಕ್ಕೆ ಸ್ವಾಮಿಗಾಗಿ ಆಗಮಿಸಿದ್ದವು. ಅಂದು ಗರುಡವಾಹನನಾಗಿ ಸ್ವಾಮಿ ಭಕ್ತರಿಗೆ ದರ್ಶನ ನೀಡುವುದರಲ್ಲಿ ಅತಿಶಯವಾದ ಅಂಶವೆಂದರೆ ಮೂಲವರರಿಗೆ ತೊಡಿಸುವ ಅನೇಕ ಆಭರಣಗಳನ್ನು ಉತ್ಸವರು ಧರಿಸುವಿಕೆ. ಲಕ್ಷ್ಮೀಹಾರ, ಸಹಸ್ರನಾಮದ ಕಾಸಿನ ಹಾರ, ಮಕರಕಂಠಿಹಾರ, ಮೊದಲಾದ ಅಮೂಲ್ಯ ಅನರ್ಘ್ಯ ಅಲಂಕಾರಗಳೊಡನೆ ಭಕ್ತರ ನೇತ್ರಾನಂದಕರನಾಗಿ ಸ್ವಾಮಿ ಬೀದಿವರಿದು ಬರುವಾಗ ಗೋವಿಂದ ನಾಮ ಘೋಷ ನಭವನ್ನು ನಡುಗಿಸುವಂತೆ ತುಂಬಿ ಹರಿಯುತ್ತಿತ್ತು. ಲಕ್ಷಾಂತರ ಮಂದಿ ತಿರುವೀಧಿಗಳ ಇಕ್ಕೆಲದಲ್ಲಿ ಕುಳಿತು ನಿಂತು ಸ್ವಾಮಿಯನ್ನು ನೋಡಿ ತಣಿದರು. ಮಾರನೆಯ ದಿನ ಬೆಳಗ್ಗೆ ಹನುಮದ್ವಾಹನವಾದ ಮೇಲೆ ಮಧ್ಯಾಹ್ನ ವಸಂತೋತ್ಸವ ನಡೆಯಿತು. ವಸಂತ ಮಂಟಪಕ್ಕೆ ಸ್ವಾಮಿ ಬಂಗಾರದ ರಥದಲ್ಲಿ ಆಗಮಿಸಿದ್ದು ಮತ್ತೊಂದು ಅತಿಶಯದ ದೃಶ್ಯವಾಗಿದ್ದಿತು. ಅಂದು ಸಂಜೆ ಗಜವಾಹನ ನಡೆಯಿತು.

೨೦ ರಂದು ಶುಕ್ರವಾರದ ಮತ್ತೊಂದು ಮುಖ್ಯ ಘಟನೆಯೆಂದರೆ ಸ್ವಾಮಿ ಸಂದರ್ಶನಕ್ಕೆಂದು ಭಾರತದ ರಾಷ್ಟ್ರಪತಿ ಡಾ|| ಶಂಕರದಯಾಳ ಶರ್ಮ ಅವರು ಆಗಮಿಸಿದ್ದು. ಅಂದು ರಾತ್ರಿ ಸ್ವಾಮಿಯನ್ನು ದರ್ಶಿಸಿದ ರಾಷ್ಟ್ರಪತಿಗಳು ಸ್ವಾಮಿಯು ಗಜವಾಹನದಲ್ಲಿದ್ದದ್ದನ್ನು ಕಂಡು ಆನಂದ ತುಂದಿಲರಾದರು. ಮಾರನೆಯದಿನ ಶನಿವಾರದಂದು ಸುಪ್ರಭಾತ ಸೇವೆಯಲ್ಲಿ ಪಾಲುಗೊಂಡರು.

ಬ್ರಹ್ಮೋತ್ಸವದ ಇನ್ನೊಂದು ಪ್ರಮುಖ ಘಟ್ಟವೆಂದರೆ ೨೨-೯-೯೬ ರಂದು ನಡೆದ ರಥೋತ್ಸವ. ಅದರ ಹಿಂದಿನ ದಿನವೇ ಬೆಳಗ್ಗೆ ಸೂರ್ಯಪ್ರಭ ವಾಹನ, ಸಂಜೆ ಚಂದ್ರಪ್ರಭವಾಹನಗಳು ನಡೆದಿದ್ದವು. ೨೨ ರಂದು ಬೆಳಗ್ಗೆ ಉಭಯ ನಾಯಕಿ



ಯರೊಡನೆ ಸ್ವಾಮಿ ರಥವನ್ನೇರಿ ಬೀದಿಯಲ್ಲಿ ಬರುತ್ತಿರಲು ಅಪಾರ ಜನ ಗೋವಿಂದ ನಾಮಘೋಷ ಮಾಡುತ್ತ ಸ್ವಾಮಿಯನ್ನು ಹೃತ್ಕಮಲ ರಥಕ್ಕೇರಿಕೊಂಡರು. ಅಂದು ಸಂಜೆ ಅಶ್ವವಾಹನದಲ್ಲಿ ಸ್ವಾಮಿ ದರ್ಶನವಿತ್ತರು.

ಚಕ್ರಸ್ನಾನ ೨೩-೯-೯೬ ರಂದು ನಡೆಯಿತು. ಶ್ರೀದೇವಿ ಭೂದೇವಿಯರೊಡನೆ ಪಲ್ಲಕ್ಕಿಯಲ್ಲಿ ಹೊರಬಂದ ಸ್ವಾಮಿ, ಸುದರ್ಶನರೊಡನೆ ಆಲಯದ ತಿರುವೀಧಿಗಳಲ್ಲಿ ಹೊರಟು ವರಾಹಸ್ವಾಮಿ ಆಲಯಕ್ಕೆ ಬಿಜಮಾಡಿಸಿ ಸಕಲರ ಪೂಜೆಯನ್ನು



ಒಪ್ಪಿಕೊಂಡರು. ನಂತರ ಸ್ವಾಮಿಯ ಪ್ರತಿನಿಧಿಯಾಗಿ ಸುದರ್ಶನರಿಗೆ ಚಕ್ರಸ್ನಾನವಾಯಿತು. ಚಕ್ರಸ್ನಾನದ ವೇಳೆಯಲ್ಲಿ ಸ್ವಾಮಿ ಪುಷ್ಕರಿಣಿಯಲ್ಲಿ ಸಾವಿರಾರು ಮಂದಿಯೂ ಸ್ನಾನಮಾಡಿದರು. ಅಂದು ಸಂಜೆ ಆಲಯದಲ್ಲಿ ಧ್ವಜಾವರೋಹಣವಾಯಿತು.

ಸೆಪ್ಟಂಬರ್ ೧೮ ರಂದು ಬುಧವಾರ ತಿರುಮಲೆಯಲ್ಲಿನ ಪೆದ್ದ ಜೀಯಂಗಾರ್ ಮಠದ ಮೇಲೆ ಅತ್ಯಂತ ಆಧುನಿಕ ವಿದ್ಯುತ್ ವರ್ಣರಂಜಿತ ಬೆಳಕಿನ ಫಲಕವನ್ನು ತಿ. ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ.ಕೆ.ಆರ್. ವಿನಾಯಕ್ ಅವರು ಉದ್ಘಾಟಿಸಿದರು. ಈ ಎಲೆಕ್ಟ್ರಾನಿಕ್ ಡಿಸ್‌ಪ್ಲೇ ಬೋರ್ಡ್‌ನಲ್ಲಿ ತಿರುಮಲೆಯ ಆಲಯದ ದರ್ಶನ ವೇಳೆ, ವಿವಿಧ ಸೇವೆಯ ವಿವರಗಳು, ಸ್ವಾಮಿ ಮಹಿಮೆಯ ವಾಕ್ಯಗಳು ಆಂಗ್ಲ ಹಾಗೂ ತೆಲುಗು ಭಾಷೆಯಲ್ಲಿ ಮೂಡಿಬರುವುವು.

ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿ ದಿನವೂ ಸಂಜೆಯ ಹೊತ್ತಿನಲ್ಲಿ ದೇವಾಲಯದ ಹೊರಗಡೆ ಸಹಸ್ರ ದೀಪಾಲಂಕಾರ ಮಂಟಪದಲ್ಲಿ ಸ್ವಾಮಿಗೆ ಉಯ್ಯಾಲೆ ಸೇವೆ ನಡೆಯಿತು. ಸಾವಿರಾರು ಮಂದಿ ಭಕ್ತರು ಹಳೆಯ ಆಸ್ಥಾನ ಮಂಟಪದ ಮೆಟ್ಟಿಲಿನ ಮೇಲೆ ರಥ ಬೀದಿಯಲ್ಲಿ ಕುಳಿತು ನಿಂತು ಸ್ವಾಮಿಯನ್ನು ದರ್ಶಿಸಿ ಆನಂದಿಸಿದರು. ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರು ಸ್ವಾಮಿಯ ಉಯ್ಯಾಲೆ ಸೇವೆಯಲ್ಲಿನ ಅನ್ನಮಾಚಾರ್ಯ ಕೀರ್ತನೆಗಳನ್ನು ಹಾಡಿ ಸೇವಿಸಿದರು.

ಬ್ರಹ್ಮೋತ್ಸವಗಳ ದಿನಗಳಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಸಂದರ್ಶನಕ್ಕೆಂದು ದೂರದೂರುಗಳಿಂದ ಬಂದ ಭಕ್ತರಿಗೆ ನಿರಂತರ ಅನ್ನದಾನವನ್ನು ಮಾಡಲಾಯಿತು. ಇದಲ್ಲದೆ ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ಭಕ್ತರಿಗೂ ಆಹಾರದ ಪೊಟ್ಟಣಗಳನ್ನು ಉಚಿತವಾಗಿ ಹಂಚಲಾಯಿತು.

ಬ್ರಹ್ಮೋತ್ಸವಗಳ ಸಮಯದಲ್ಲಿ ತಿರುಮಲೆಯ, ಶಂಕುಮಿಟ್ಟ ಉದ್ಯಾನವನದಲ್ಲಿ ತಿ. ತಿ. ದೇ. ಉಪವನ ವಿಭಾಗದವರು ೧೫-೯-೯೬ ರಿಂದ ೨೩-೯-೯೬ ವರೆಗೆ ಫಲಪುಷ್ಪ ಪ್ರದರ್ಶನವನ್ನು ಏರ್ಪಡಿಸಿದ್ದರು. ೧೫ ರಂದು ಸಂಜೆ ಈ ಪ್ರದರ್ಶನವನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ.ಕೆ.ಆರ್. ವಿನಾಯಕ್ ಉದ್ಘಾಟಿಸಿದರು.

ವಿವಿಧ ಫಲಪುಷ್ಪಗಳಲ್ಲಿ ಉಪವನವಿಭಾಗದವರಲ್ಲಿನ ಕಲಾವಿದರು ವಿವಿಧ ಆಕೃತಿಗಳನ್ನುಂಟುಮಾಡಿದ್ದದ್ದು ಕಂಡುಬಂದಿತು. ಶ್ರೀ ವೆಂಕಟೇಶ್ವರಸ್ವಾಮಿ, ಗಣಪತಿ, ಶಂಖ ಚಕ್ರಗಳು ವಿವಿಧ ತರಕಾರಿಗಳಿಂದಾಗಿದ್ದವು. ಅತ್ಯಂತ ಆಕರ್ಷಕವಾಗಿದ್ದ ಈ ಪ್ರದರ್ಶನ ಮೇಲುಸ್ತುವಾರಿಯನ್ನು ಉಪವನ ವಿಭಾಗದ







ಸೂಪರಿಂಟೆಂಡೆಂಟ್ ಶ್ರೀ ನಾಥಮುನಿರೆಡ್ಡಿ ನೋಡಿಕೊಂಡರು.

ತಿರುಮಲೆಯಲ್ಲಿನ ವಿವಿಧ ಔಷಧ ಮೂಲಿಕೆಗಳ, ಮರದ ಬೊಂಬೆಗಳ, ಚಂದನದ ಬೊಂಬೆಗಳ ಪ್ರದರ್ಶನವೂ ಸಹ ಏರ್ಪಾಡಾಗಿದ್ದು, ಅರಣ್ಯ ಇಲಾಖೆಯವರಿಂದ ಆಕರ್ಷಣೀಯವಾಗಿ ಸಜ್ಜುಗೊಂಡಿದ್ದು ಈ ಪ್ರದರ್ಶನ ನೋಡುಗರನ್ನು ನಿಂತು ನೋಡಿ ನಡೆಯುವಂತೆ ಮಾಡಿದ್ದಿತು ಎಂದರೆ ಆಶ್ಚರ್ಯವಿಲ್ಲ.

ಈಬಾರಿಯ ಬ್ರಹ್ಮೋತ್ಸವಗಳಲ್ಲಿ ದಿನವೂ ವಿವಿಧ ವಾಹನಗಳ ಮೆರವಣಿಗೆಯ ಮುಂದೆ ಪುಷ್ಪ ಪಲ್ಲಕ್ಕಿಯ ಇದು ಜನರನ್ನು ಹೆಚ್ಚಿಗೆ ಆಕರ್ಷಿಸುವಲ್ಲಿ ಸಫಲವಾಯಿತು.

ವಿದ್ಯುತ್ ಇಲಾಖೆಯವರು ಅಲ್ಲಲ್ಲಿ ವಿವಿಧ ವರ್ಣ ವಿನ್ಯಾಸಗಳನ್ನುಂಟುಮಾಡಿ, ಹಲವಾರು ಆಕರ್ಷಕ ಚಿತ್ರಗಳನ್ನುಂಟು ಮಾಡಿದ್ದರು. ಉಪವನ ವಿಭಾಗದವರು ಹಲವು ರೀತಿಯ ವರ್ಣಮಯ ಪುಷ್ಪಗಳಲ್ಲಿ ಹಲವು ಚಿತ್ರಗಳನ್ನು ತೆಗೆದಿದ್ದು ಹಗಲಿನಲ್ಲಿ ಹೂವು, ರಾತ್ರಿಯಲ್ಲಿ ಬೆಳಕು ಯಾತ್ರಿಕರಿಗೆ ಕರ್ಷಣ ಕೇಂದ್ರವಾಗಿದ್ದುವು.

ಬ್ರಹ್ಮೋತ್ಸವದ ಯಾತ್ರಿಕರ ಸೌಕರ್ಯದಲ್ಲಿ ಪ್ರಕಟನಶಾಖೆಯ ಪುಸ್ತಕಾಲಯಗಳೂ ಆಕರ್ಷಣೆಯ ಕೇಂದ್ರಗಳಾಗಿದ್ದವು. ಹಲವು ಭಾಷೆಯ, ಹಲವಾರು ಧಾರ್ಮಿಕ ಪುಸ್ತಕಗಳು, ಚಿತ್ರಗಳು, ಧ್ವನಿಸುರುಳಿಗಳು, ವೀಡಿಯೋ ಚಿತ್ರಗಳು ಪ್ರದರ್ಶನದಲ್ಲಿದ್ದು ಜನರು ಉತ್ಸಾಹದಿಂದ ಕೊಂಡುಕೊಳ್ಳುವುದು ಕಂಡುಬಂದಿತು. ಆಸ್ಥಾನ ಮಂಟಪದಲ್ಲಿ ಧರ್ಮ ಪ್ರಚಾರಪರಿಷತ್, ದಾಸಸಾಹಿತ್ಯಪ್ರಾಜೆಕ್ಟ್, ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್‌ಗಳ ವಿವಿಧ ರೀತಿಯ ಕಾರ್ಯಕ್ರಮಗಳು ಬೆಳಗಿನಿಂದ ರಾತ್ರಿಯವರಿಗೆ ನಿರಂತರವಾಗಿ ನಡೆದು ಆಕರ್ಷಿಸಿದವು. ಆಲಯದಿಂದ ಹೊರಬಂದ ಸ್ವಾಮಿಯ ಉತ್ಸವಕಾರ್ಯಕ್ರಮಗಳನ್ನೂ, ಆಸ್ಥಾನಮಂಟಪದಲ್ಲಿ ನಡೆದ ಸಂಗೀತ, ಪುರಾಣ ಪಠಣ, ಗೀತಾಪಠಣ ಹರಿಕಥೆ ಮೊದಲಾದ ಕಾರ್ಯಕ್ರಮಗಳನ್ನೂ ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ. ಮೂಲಕ ತಿರುಮಲೆಯ ಆಯಕಟ್ಟಿನ ಸ್ಥಳಗಳಲ್ಲಿ ನೋಡಲನುಕೂಲವಾಗುವಂತೆ ಮಾಡಲಾಗಿದ್ದಿತು. ದೂರದರ್ಶನದಲ್ಲಿ ಬ್ರಹ್ಮೋತ್ಸವದ ಕಾರ್ಯಕ್ರಮ ರಾಷ್ಟ್ರೀಯ ಸ್ತರದಲ್ಲಿ ಪ್ರಸಾರವಾಗಿ ಭಕ್ತರನ್ನು ತಣಿಸಿತು. ಆಕಾಶವಾಣಿಯ ತಿರುಪತಿ ಕೇಂದ್ರ ಉತ್ಸವಗಳ ರನ್ನಿಂಗ್ ಕಾಮೆಂಟರಿಯನ್ನೂ ಏರ್ಪಡಿಸಿದ್ದಿತು.

ಹೀಗೆ ಬ್ರಹ್ಮೋತ್ಸವ ಕಾರ್ಯಕ್ರಮಗಳು ಯಶಸ್ವಿಯಾಗಿ ಮುಕ್ತಾಯಗೊಂಡ ಮೇಲೂ, ಮುಂದಿನ ತಿಂಗಳಲ್ಲಿ ನಡೆಯುವ ನವರಾತ್ರಿ ಬ್ರಹ್ಮೋತ್ಸವಗಳನ್ನೂ ದರ್ಶಿಸುವ ಬಯಕೆಯಿಂದ ಯಾತ್ರಿಕ ಜನ ಹಿಂದಿರುಗಿದರೆಂದರೆ ಅಚ್ಚರಿಯಿರಲಿಲ್ಲ.







Published on behalf of T.T.Devasthanams by N.S.Ramamurthy, M.A., Editor and
Printed at T.T.D.Press by M. Lakshmana Rao, B.A., L.P.T., T.T.D.Press, Tirupati - 517 507.

